# ಕರ್ನಾಟಕ ವಿಧಾನ ಸಭೆ



1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1078
2. ಸದಸ್ಯರ ಹೆಸರು : ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ – ದಕ್ಷಿಣ)
3. ಉತ್ತರಿಸಬೇಕಾದ ದಿನಾಂಕ : 10–03–2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ದಿನಾಂಕ 05/08/2019 ರಂದೀಚೆಗೆ ವಿವಿಧ ನಿಗಮಗಳಿಗೆ ಹಲವಾರು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಆಯವ್ಯಯದ ಹೊರಗಡೆಯಿಂದ ಅಂದರೆ ಬ್ಯಾಂಕ್ ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲದ ಮತ್ತು ಇತರೆ ರೂಪದಲ್ಲಿ ಹಣ ಪಡೆಯಲು ಅನುಮತಿ ನೀಡಲಾಗಿದೆಯೇ; ಹಾಗಿದ್ದಲ್ಲಿ, ನಿಗಮವಾರು ಸಂಪೂರ್ಣ ಮಾಹಿತಿ ನೀಡುವುದು | 2019–20ನೇ ಸಾಲಿಗೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲು ಆಯವ್ಯಯದ ಹೊರಗಡೆಯಿಂದ ಅಂದರೆ ಬ್ಯಾಂಕು ಮತ್ತು ಹಣಕಾಸು ಸಂಸ್ಥೆಗಳಿಂದ ಸಾಲದ ರೂಪದಲ್ಲಿ ಈ ಕೆಳಗಿನಂತೆ ಅನುಮತಿ ನೀಡಾಗಿದೆ.<br>(₹ ಕೋಟಿಗಳಲ್ಲಿ)<br>1. ಕೃಭಾ.ಜ.ನಿ.ನಿ — 1000.00<br>2. ಕೆ.ಎನ್.ಎನ್.ಎಲ್ — 1265.00<br>3. ಸಿ.ಎನ್.ಎನ್.ಎಲ್ — 500.00<br>4. ವಿ.ಜೆ.ಎನ್.ಎಲ್ — 735.00<br>ಒಟ್ಟು — **3500.00** |
| ಆ | ಬ್ಯಾಂಕು ಮತ್ತು ಹಣಕಾಸು ಸಂಸ್ಥೆಗಳಿಂದ ಪಡೆದ ಆರ್ಥಿಕ ನೆರವಿನಿಂದ ನೀರಾವರಿ ನಿಗಮಗಳು ಯಾವ ಕಾಮಗಾರಿಗಳನ್ನು ಕೈಗೊಳ್ಳಲು ಆರ್ಥಿಕ ಇಲಾಖೆಯ ಅನುಮತಿ ನೀಡಿದೆ ಮತ್ತು ಯಾವ ಮಾನದಂಡ ನಿಗಧಿಪಡಿಸಿದೆ; | IEBR ಅಡಿಯಲ್ಲಿ ನಿಗಮಗಳು ಸಂಗ್ರಹಿಸುವ ಮೊತ್ತವನ್ನು ನಿಗಮದಡಿಯಲ್ಲಿನ ನೀರಾವರಿ ಸೌಲಭ್ಯ ಕಲ್ಪಿಸಲು, ಕೆರೆ ತುಂಬಿಸಲು ಯೋಜನೆಗಳು, ನಾಲಾ ಆಧುನೀಕರಣ ಕಾಮಗಾರಿಗಳಿಗೆ ಹಾಗೂ ಭೂಸ್ವಾಧೀನಕ್ಕಾಗಿ ಬಳಸಿಕೊಳ್ಳಲಾಗುತ್ತಿದೆ |
| ಇ | ಬ್ಯಾಂಕು ಮತ್ತು ಹಣಕಾಸು ಸಂಸ್ಥೆಯಿಂದ ಪಡೆದುಕೊಂಡ ಸಾಲದಲ್ಲಿ ನಿಗಮವಾರು ಎಷ್ಟು ಹಣವನ್ನು ಭೂಸ್ವಾಧೀನ ಮತ್ತು ಸಾಲ ತಿರುವಳಿ ಹಾಗೂ ಬಡ್ಡಿ ಪಾವತಿಸಲು ಉಪಯೋಗಿಸಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | IEBR ಅಡಿಯಲ್ಲಿ ನಿಗಮಗಳು ಪಡೆದಿರುವ ಸಾಲದ ಅಸಲಿನ ಮರುಪಾವತಿ ಹಾಗೂ ಬಡ್ಡಿ ಪಾವತಿಗಾಗಿ ಆಯವ್ಯಯದಲ್ಲಿ ಪ್ರತ್ಯೇಕವಾಗಿ ಅನುದಾನವನ್ನು ಒದಗಿಸಲಾಗುತ್ತಿದ್ದು, ಬ್ಯಾಂಕು ಮತ್ತು ಹಣಕಾಸು ಸಂಸ್ಥೆಯಿಂದ ಪಡೆದುಕೊಂಡ ಸಾಲದಲ್ಲಿ ಸಾಲ ತಿರುವಳಿ ಮತ್ತು ಬಡ್ಡಿಯನ್ನು ಪಾವತಿಸಲು ಉಪಯೋಗಿಸಲಾಗುತ್ತಿಲ್ಲ. ಇದಕ್ಕಾಗಿ ಆಯವ್ಯಯದಲ್ಲಿ ನಿಗಮಗಳಿಗೆ ಪ್ರತ್ಯೇಕವಾಗಿ ಅನುದಾನ ಒದಗಿಸಲಾಗುತ್ತಿದೆ.<br>ಮುಂದುವರೆದು, ಭೂಸ್ವಾಧೀನ ಪಾವತಿಗಾಗಿ ಬ್ಯಾಂಕು ಮತ್ತು ಹಣಕಾಸು ಸಂಸ್ಥೆಗಳಿಂದ ಪಡೆದ ಸಾಲದ ಮೊತ್ತದಲ್ಲಿ ಈ ಕೆಳಗಿನಂತೆ ನಿಗಮವಾರು ಉಪಯೋಗಿಸಲಾಗಿರುತ್ತದೆ.<br>(₹ ಕೋಟಿಗಳಲ್ಲಿ)<br>1. ಕೃಭಾ.ಜ.ನಿ.ನಿ — -<br>2. ಕೆ.ಎನ್.ಎನ್.ಎಲ್ — 127.15<br>3. ಸಿ.ಎನ್.ಎನ್.ಎಲ್ — 5.13<br>4. ವಿ.ಜೆ.ಎನ್.ಎಲ್ — 40.00<br>ಒಟ್ಟು — **172.28** |

ಸಂಖ್ಯೆ: ಎಫ್‌ಡಿ ೪೨ ಎಫ್‌ಸಿ-1 / 2020

(ಬಿ.ಎಸ್.ಯಡಿಯೂರಪ್ಪ)

ಕರ್ನಾಟಕ ಸರ್ಕಾರ

ಸಂಖ್ಯೆ: ಸನೀಇ 15 ವಿಸವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ, 2ನೇ ಮಹಡಿ,
ಬೆಂಗಳೂರು, ದಿನಾಂಕ:12.03.2020.

**ಇವರಿಂದ:**
**ಸರ್ಕಾರದ ಕಾರ್ಯದರ್ಶಿ,**
ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ,
ವಿಕಾಸಸೌಧ, ಬೆಂಗಳೂರು-560001.

116
LIS
16/3/20

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು.

ಮಾನ್ಯರೇ,

**ವಿಷಯ:** ಶ್ರೀ ರಘುಪತಿ ಭಟ್ ಮಾನ್ಯ ವಿಧಾನಸಭಾ ಸದಸ್ಯರು ಮಂಡಿಸಿರುವ ಭರವಸೆ ಸಂಖ್ಯೆ: 1116ಕ್ಕೆ ಉತ್ತರ ಕಳುಹಿಸುವ ಬಗ್ಗೆ.

* * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ರಘುಪತಿ ಭಟ್ ಮಾನ್ಯ ವಿಧಾನಸಭಾ ಸದಸ್ಯರು ಮಂಡಿಸಿರುವ ಭರವಸೆ ಸಂಖ್ಯೆ:1116ಕ್ಕೆ ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆಯ ಉತ್ತರದ 10 ಪ್ರತಿಗಳನ್ನು ಈ ಮೂಲಕ ಲಗತ್ತಿಸಿ ಕಳುಹಿಸಿಕೊಡಲು ನಾನು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಜ್ಯೋತಿ ಎಂ.ಎಸ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಣ್ಣ ನೀರಾವರಿ ಮತ್ತು ಅಂತರ್ಜಲ
ಅಭಿವೃದ್ಧಿ ಇಲಾಖೆ.

ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1116
2. ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ.
3. ಉತ್ತರಿಸಬೇಕಾದ ದಿನಾಂಕ : 10-03-2020.
4. ಉತ್ತರಿಸುವವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಉಡುಪಿ ಜಿಲ್ಲೆಯಾದ್ಯಂತ ಪ್ರವಾಹದಿಂದ ನದಿದಂಡೆಗಳು ಕೊಚ್ಚಿ ಹೋಗಿದ್ದು, ಇದರ ಸಂರಕ್ಷಣೆಗೆ ಕೈಗೊಂಡ ಕ್ರಮಗಳೇನು; | ಉಡುಪಿ ಜಿಲ್ಲೆಯಾದ್ಯಂತ 2019-20ನೇ ಸಾಲಿನಲ್ಲಿ ಬಿದ್ದ ಭಾರಿ ಮಳೆಗೆ ಪ್ರವಾಹದಿಂದ ನದಿದಂಡೆಗಳು ಕೊಚ್ಚಿ ಹೋಗಿರುವ ಮಾಹಿತಿಯು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಒಟ್ಟು 64 ನದಿದಂಡೆ ಸಂರಕ್ಷಣಾ ಕಾಮಗಾರಿಗಳನ್ನು ರೂ.6502.06 ಲಕ್ಷಗಳ ಅನುದಾನದಲ್ಲಿ ಕೈಗೊಳ್ಳಲು ಅನುಮೋದನೆ ನೀಡಿದ್ದು, ಪ್ರಸ್ತುತ ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |
| ಆ | ಜಿಲ್ಲೆಯಲ್ಲಿ ಎಷ್ಟು ನದಿ ದಂಡೆಗಳು ಕೊಚ್ಚಿ ಹೋಗಿರುವ ಹಾಗೂ ಕೃಷಿ ಭೂಮಿಗೆ ಹಾನಿ ಆಗಿರುವ ಬಗ್ಗೆ ವರದಿ ತಯಾರಿಸಲಾಗಿದೆ: (ಸಂಪೂರ್ಣ ವಿವರಗಳನ್ನು ನೀಡುವುದು) | ಉಡುಪಿ ಜಿಲ್ಲೆ ವ್ಯಾಪ್ತಿಯಲ್ಲಿ ಪ್ರವಾಹದಿಂದ ನದಿದಂಡೆಗಳು ಕೊಚ್ಚಿ ಹೋಗಿರುವ ಕುರಿತು ಇಲಾಖೆಯ ಅಧಿಕಾರಿಗಳಿಂದ ಸ್ಥಳ ಪರಿಶೀಲನೆ ನಡೆಸಲಾಗಿದ್ದು, ಅದರನುಸಾರ 149 ಸ್ಥಳಗಳಲ್ಲಿ ನದಿದಂಡೆಗಳು ಕೊಚ್ಚಿಹೋಗಿರುತ್ತವೆ. 2019-20ನೇ ಸಾಲಿನಲ್ಲಿ 64 ನದಿ ದಂಡೆ ಕಾಮಗಾರಿಗಳನ್ನು ರೂ.6502.06ಲಕ್ಷಗಳ ಅಂದಾಜು ಮೊತ್ತದಲ್ಲಿ ಕೈಗೊಳ್ಳಲಾಗುತ್ತಿದೆ. ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ.<br>ಕೃಷಿ ಭೂಮಿಗೆ ಹಾನಿಯಾಗಿರುವ ವರದಿಯನ್ನು ತಯಾರಿಸುವ ಕಾರ್ಯ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಬರುವುದಿಲ್ಲ. |
| ಇ | ಪ್ರವಾಹದಿಂದ ಕೃಷಿಭೂಮಿ ಹಾನಿ ಆಗಿರುವ ರೈತರಿಗೆ ಪರಿಹಾರಗಳನ್ನು ನೀಡಲು ಕ್ರಮ ಕೈಗೊಳ್ಳಲಾಗಿದೆಯೇ; | ಕೃಷಿಭೂಮಿ ಹಾನಿಗೆ ಪರಿಹಾರ ನೀಡುವ ವಿಷಯ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ಒಳಪಡುವುದಿಲ್ಲ. |
| ಈ | ಕಳೆದ 3 ವರ್ಷಗಳಿಂದ ಇದುವರೆಗೆ ಉಡುಪಿ ಜಿಲ್ಲೆಗೆ ಪ್ರವಾಹ ನಿಯಂತ್ರಣದಲ್ಲಿ ನದಿದಂಡೆ ಸಂರಕ್ಷಣೆಗೆ ಬಿಡುಗಡೆಗೊಳಿಸಿದ ಅನುದಾನ ಎಷ್ಟು? (ಕ್ಷೇತ್ರವಾರು ಸಂಪೂರ್ಣ ವಿವರ ನೀಡುವುದು) | ಕಳೆದ 3 ವರ್ಷಗಳಿಂದ ಇದುವರೆಗೆ ಉಡುಪಿ ಜಿಲ್ಲೆಗೆ ಪ್ರವಾಹ ನಿಯಂತ್ರಣ ಲೆಕ್ಕಶೀರ್ಷಿಕೆಯಡಿಯಲ್ಲಿ ಬಿಡುಗಡೆಗೊಳಿಸಿದ ಕ್ಷೇತ್ರವಾರು ಅನುದಾನದ ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

ಕಡತ ಸಂಖ್ಯೆ: MID 15 LAQ 2020

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1116ಕ್ಕೆ ಅನುಬಂಧ-1

ಘೋಷ್ವಾರೆ

ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ವಿಭಾಗ, ಮಂಗಳೂರು

| ಕ್ರ.ಸಂ. | ಲೆಕ್ಕ ಶೀರ್ಷಿಕೆ | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಮಂಜೂರಾದ ಕಾಮಗಾರಿಗಳ ವಿವರ | | ಷರಾ |
|---|---|---|---|---|---|---|---|
| | | | | | ಕಾಮಗಾರಿಗಳ ಸಂಖ್ಯೆ | ಅಂದಾಜು ಮೊತ್ತ | |
| 1 | 2 | 3 | 4 | 5 | 6 | 7 | 8 |
| 1 | 4711-01-103-1-00-140 ಪ್ರವಾಹ ನಿಯಂತ್ರಣ ಕಾಮಗಾರಿಗಳು (ಪ್ರಧಾನ) | ಉಡುಪಿ | ಉಡುಪಿ/ಕಾಪು | ಕಾಪು | 9 | 350.00 | |
| | | | ಉಡುಪಿ/ಕಾಪು | ಉಡುಪಿ | 16 | 4,189.26 | |
| | | | ಕುಂದಾಪುರ/ಉಡುಪಿ | ಕುಂದಾಪುರ | 6 | 393.70 | |
| | | | ಬೈಂದೂರು/ಕುಂದಾಪುರ | ಬೈಂದೂರು | 22 | 1,150.60 | |
| | | | ಕಾರ್ಕಳ/ಹೆಬ್ರಿ | ಕಾರ್ಕಳ | 11 | 418.50 | |
| | | ಒಟ್ಟು: | | | 64 | 6,502.06 | |

ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1116ಕ್ಕೆ ಅನುಬಂಧ-1

2019-20ನೇ ಸಾಲಿಗೆ ಮಂಜೂರಾದ ಕಾಮಗಾರಿಗಳ ಪ್ರಗತಿ ವರದಿ (4711-01-103-1-00-140 ಪ್ರವಾಹ ನಿಯಂತ್ರಣ ಪ್ರಧಾನ ಕಾಮಗಾರಿಗಳು)

| ಕ್ರ.ಸಂ. | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಕಾಮಗಾರಿಯ ಹೆಸರು | ಮಂಜೂರಾದ ಅಂದಾಜು ಮೊತ್ತ | ವೆಚ್ಚ ರೂ. | ಕಾಮಗಾರಿಯ ಪ್ರಸಕ್ತ ಹಂತ ವಿವರಣೆಯೊಂದಿಗೆ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಉಡುಪಿ | ಕಾಪು | ಕಾಪು | ಪಲಿಮಾರು ಗ್ರಾಮದ ಪಲಿಮಾರು ತೋಡು ಅಭಿವೃದ್ಧಿ ಕಾಮಗಾರಿ. | 20.00 | | ಕಾಮಗಾರಿ ಪ್ರಗತಿಯಲ್ಲಿದೆ |
| 2 | ಉಡುಪಿ | ಕಾಪು | ಕಾಪು | ಕಾಪು ಪುರಸಭೆಯ 11 ಮತ್ತು 12ನೇ ವಾರ್ಡ್‌ನ ರಾಮನಗರ ತೋಡು ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 3 | ಉಡುಪಿ | ಕಾಪು | ಕಾಪು | ಕಾಪು ಪುರಸಭೆಯ 11 ನೇ ವಾರ್ಡ್‌ನ ಲೈಟ್‌ಹೌಸ್ ಬಳಿ ತೋಡು ಅಭಿವೃದ್ಧಿ ಕಾಮಗಾರಿ. | 35.00 | | ಕಾಮಗಾರಿ ಪ್ರಗತಿಯಲ್ಲಿದೆ |
| 4 | ಉಡುಪಿ | ಕಾಪು | ಕಾಪು | ಮಜೂರು ಗ್ರಾಮದ ಪಾದೂರು ಪಂಜಾಲಿ ಯಶೋದ ಪೂಜಾರ್ತಿ ಮನೆ ಬಳಿ ನದಿ ದಂಡೆ ಅಭಿವೃದ್ಧಿ ಕಾಮಗಾರಿ. | 35.00 | | ಕಾಮಗಾರಿ ಪ್ರಗತಿಯಲ್ಲಿದೆ |
| 5 | ಉಡುಪಿ | ಕಾಪು | ಕಾಪು | ಪಡುಬಿದ್ರಿ ಗ್ರಾಮದ ನಡ್ಸಾಲು ಸೇತುವೆ ಬಳಿ ಮತ್ತು ಪಡುಬಿದ್ರೆ ಗ್ರಾಮದ ಪಾದೆಬೆಟ್ಟು ಮುಗಿಲಕೋಡಿ ಎಂಬಲ್ಲಿ ನದಿ ದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಾರಂಭಿಸಬೇಕು |
| 6 | ಉಡುಪಿ | ಕಾಪು | ಕಾಪು | ಮಜೂರು ಗ್ರಾಮದ ತೆಂಕರಗುತ್ತು ಸುಧಾಕರ್ ಆಚಾರ್ಯರ ಮನೆ ಬಳಿ ನದಿ ದಂಡೆ ಅಭಿವೃದ್ಧಿ ಕಾಮಗಾರಿ. | 40.00 | | ಕಾಮಗಾರಿ ಪ್ರಾರಂಭಿಸಬೇಕು |
| 7 | ಉಡುಪಿ | ಕಾಪು | ಕಾಪು | 92ನೇ ಹೆರೂರು ಗ್ರಾಮದ ಮಜೂರು ಗ್ರಾಮಪಂಚಾಯತ್‌ನ ಕಲ್ಲುಗುಡ್ಡೆ ಸೇತುವೆ ಬಳಿ ತೋಡಿನ ಅಭಿವೃದ್ಧಿ ಕಾಮಗಾರಿ. | 20.00 | | ಕಾಮಗಾರಿ ಪ್ರಗತಿಯಲ್ಲಿದೆ |
| 8 | ಉಡುಪಿ | ಕಾಪು | ಕಾಪು | ನಂದಿಕೂರು ಮತ್ತು ಪಲಿಮಾರು ಗ್ರಾಮದ ಅಡ್ವೆಯಿಂದ ಅವರಾಲ್‌ಪಟ್ಟು ವರೆಗೆ ಅಡ್ವೆಹೊಳೆ ಮತ್ತು ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 9 | ಉಡುಪಿ | ಕಾಪು | ಕಾಪು | ಪಾದೆಬೆಟ್ಟು ಗ್ರಾಮದ ವಿಷ್ಣುಮೂರ್ತಿ ದೇವಸ್ಥಾನದ ಎದುರು ಹರಿಯುವ ತೋಡಿನ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| | | | | | 350.00 | | |
| 1 | ಉಡುಪಿ | ಉಡುಪಿ | ಉಡುಪಿ | ಕಡೆಕಾರು ಪಡುಕೆರೆ ಎಂಬಲ್ಲಿ ಅಯ್ದ ಭಾಗಗಳಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 2 | ಉಡುಪಿ | ಉಡುಪಿ | ಉಡುಪಿ | ಕೊಡವೂರು ಚೆನ್ನಂಗಡಿ ಮೂಡಬೆಟ್ಟು ವಾರ್ಡಿನ ಕಲ್ಮಾಡಿ ಹೊಳೆಗೆ ಆಯ್ದ ಭಾಗಗಳ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 3 | ಉಡುಪಿ | ಉಡುಪಿ | ಉಡುಪಿ | ಕುತ್ಪಾಡಿ ಪಡುಕೆರೆ ಎಂಬಲ್ಲಿ ಅಯ್ದ ಭಾಗಗಳಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 4 | ಉಡುಪಿ | ಉಡುಪಿ | ಉಡುಪಿ | ಕಲ್ಯಾಣಪುರ ಗ್ರಾಮದ ಮೂಡು ತೋನ್ಸೆ ನಿಡಂಬಳ್ಳಿ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 5 | ಉಡುಪಿ | ಉಡುಪಿ | ಉಡುಪಿ | ಉಪ್ಪೂರು ಗ್ರಾಮ ಪಂಚಾಯತ್‌ನ ನಡುಬೆಟ್ಟು ಎಂಬಲ್ಲಿ ಭಾಸ್ಕರ ಮಾಸ್ತರ್ ಮನೆಯಿಂದ 7ನೇ ಮಾರಿಗುಡಿಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 6 | ಉಡುಪಿ | ಉಡುಪಿ | ಉಡುಪಿ | ಕಡಿಯಾಳಿ ವಾರ್ಡಿನ ಸಗ್ರಿ ಗೋಪಾಲ ನಾಯ್ಕ ಮನೆ ಬಳಿಯಿಂದ ಗುಂಡಿಬೈಲು ನಾಗಬನದವರೆಗೆ ಆಯ್ದ ಭಾಗಗಳಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಗತಿಯಲ್ಲಿದೆ |
| 7 | ಉಡುಪಿ | ಉಡುಪಿ | ಉಡುಪಿ | ಕಲ್ಮಾಡಿ ಮಾರಿಗುಡಿಯಿಂದ ಕಲ್ಯಾಣಿ ಪೂಜಾರ್ತಿ ಮನೆಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ. | 44.26 | | ಕಾಮಗಾರಿ ಪ್ರಾರಂಭಿಸಬೇಕು |
| 8 | ಉಡುಪಿ | ಉಡುಪಿ | ಉಡುಪಿ | ಕಡೆಕಾರು ಗ್ರಾಮದ ಸಸಿತೋಟ ಮತ್ತು ಶಿವಳ್ಳಿ ಗ್ರಾಮದ ಪೆರಂಪಳ್ಳಿ ಅಮ್ಮಣ್ಣಿ ಪೂಜಾರ್ತಿ ಮನೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 45.00 | | ಕಾಮಗಾರಿ ಪ್ರಾರಂಭಿಸಬೇಕು |
| 9 | ಉಡುಪಿ | ಉಡುಪಿ | ಉಡುಪಿ | ಕಡೆಕಾರು ಗ್ರಾಮದ ಪಡುಕೆರೆ ಎಂಬಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ | 500.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 10 | ಉಡುಪಿ | ಉಡುಪಿ | ಉಡುಪಿ | ಕುತ್ಪಾಡಿ ಗ್ರಾಮದ ಪಡುಕೆರೆ ಎಂಬಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ | 500.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 11 | ಉಡುಪಿ | ಉಡುಪಿ | ಉಡುಪಿ | ಕಲ್ಯಾಣಪುರ ಗ್ರಾಮದ ಮೂಡುತೋನ್ಸೆ ಎಂಬಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ | 500.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 12 | ಉಡುಪಿ | ಉಡುಪಿ | ಉಡುಪಿ | ಕಲ್ಸಂಕ ಇಂದ್ರಾಣಿ ನದಿಯ ಎಡದಂಡೆಯ ತಡೆಗೋಡೆ ರಚನೆ ಕಾಮಗಾರಿ. | 450.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 13 | ಉಡುಪಿ | ಉಡುಪಿ | ಉಡುಪಿ | ಕಲ್ಸಂಕ ಇಂದ್ರಾಣಿ ನದಿಯ ಬಲದಂಡೆಯ ತಡೆಗೋಡೆ ರಚನೆ ಕಾಮಗಾರಿ | 450.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 14 | ಉಡುಪಿ | ಉಡುಪಿ | ಉಡುಪಿ | ಮಲ್ಪೆ ಗ್ರಾಮದ ಪಡುಕರೆ ಎಂಬಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ | 475.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 15 | ಉಡುಪಿ | ಉಡುಪಿ | ಉಡುಪಿ | ಉಪ್ಪೂರು ಗ್ರಾಮದ ಮಡಿಸಾಲು ಹೊಳೆಗೆ ನದಿದಂಡೆ ಸಂರಕ್ಷಣಾ ಕಾಮಗಾರಿ | 475.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| 16 | ಉಡುಪಿ | ಉಡುಪಿ | ಉಡುಪಿ | ಕೊಡವೂರು ಗ್ರಾಮದ ಚೆನ್ನಂಗಡಿ ಎಂಬಲ್ಲಿ ನದಿದಂಡೆ ಸಂರಕ್ಷಣಾ ಕಾಮಗಾರಿ | 450.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| | | | | | 4189.26 | | |
| 1 | ಉಡುಪಿ | ಬ್ರಹ್ಮಾವರ | ಕುಂದಾಪುರ | ಶಿರಿಯಾರ ಗ್ರಾಮದ ಶಿರಿಯಾರ ಮದಗದ ಅಭಿವೃದ್ಧಿ ಕಾಮಗಾರಿ. | 45.00 | | ಕಾಮಗಾರಿ ಪ್ರಾರಂಭಿಸಬೇಕು |
| 2 | ಉಡುಪಿ | ಬ್ರಹ್ಮಾವರ | ಕುಂದಾಪುರ | ಸಾಲಿಗ್ರಾಮ ಪಟ್ಟಣ ಪಂಚಾಯತ್‌ನ ಪಾರಂಪಳ್ಳಿ ಪಡುಕರೆ ಹತ್ತಿರ ಮತ್ತು ಬೆಳ್ಳೆ ಗ್ರಾಮ ಪಂಚಾಯತ್‌ನ ಸೂರ್ಗೋಳಿ ಗ್ರಾಂಜನಹೊಂಡ ಮದಗ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಾರಂಭಿಸಬೇಕು |
| 3 | ಉಡುಪಿ | ಕುಂದಾಪುರ | ಕುಂದಾಪುರ | ಕಾಳಾವರ ಗ್ರಾಮ ಪಂಚಾಯತ್‌ನ ವಕ್ವಾಡಿ ಗ್ರಾಮದ ಬಾಳ್ಕಟ್ಟುಮನೆ ಶ್ರೀಮತಿ ಚಂದು ಪೂಜಾರ್ತಿ ಮನೆ ಬಳಿ ಮತ್ತು ಬೀಜಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ರಾಧ ಮೊಗೇರ್ತಿಯವರ ಮನೆ ಹತ್ತಿರ ಮತ್ತು ಕರಿಸುಬ್ಬ ಮನೆ ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಪ್ರಾರಂಭಿಸಬೇಕು |
| 4 | ಉಡುಪಿ | ಕುಂದಾಪುರ | ಕುಂದಾಪುರ | ಹಾಲಾಡಿ ಗ್ರಾಮದ ಉದ್ದು ನಾಯ್ಕ ಮನೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.70 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 5 | ಉಡುಪಿ | ಕುಂದಾಪುರ | ಕುಂದಾಪುರ | ಬೀಜಾಡಿ ಗ್ರಾಮಪಂಚಾಯತ್ ವ್ಯಾಪ್ತಿಯ ಮೂಡುಪಡು ಕೊಳಗಳಿಂದ ಗಂಗೊಳ್ಳಿ ಹೊಳೆವರೆಗಿನ ದೊಡ್ಡ ತೋಡಿಗೆ ಎರಡೂ ಬದಿ ರಿವೆಟ್‌ಮೆಂಟ್ ನಿರ್ಮಿಸಿ ಕೃಷಿ ಭೂಮಿಗೆ ರಕ್ಷಣೆ ಒದಗಿಸುವ ಕಾಮಗಾರಿ. | 100.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |

| | | | | | | | |
|---|---|---|---|---|---|---|---|
| 6 | ಉಡುಪಿ | ಕುಂದಾಪುರ | ಕುಂದಾಪುರ | ಬೀಜಾಡಿ ಗ್ರಾಮಪಂಚಾಯತ್ ವ್ಯಾಪ್ತಿಯ ಗೋಪಾಡಿ ಗಡಿಯ ಬೀಜಾಡಿಪಡು ಕೂಳದಲ್ಲಿರುವ ಹೂಳು ತೆಗೆದು ಬದು ತಡೆಗೋಡೆ ನಿರ್ಮಾಣ, | 100.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ |
| | | | | | 393.70 | | |
| 1 | ಉಡುಪಿ | ಬೈಂದೂರು | ಬೈಂದೂರು | ನಾವುಂದ ಗ್ರಾಮದ ಸಾಲುಬುಡ ಪಾಟೀಲ್ ಮನೆ ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 2 | ಉಡುಪಿ | ಬೈಂದೂರು | ಬೈಂದೂರು | ತಲ್ಲೂರು ಗ್ರಾಮದ ಸಬ್ಲಾಡಿ ಕಳವಿನಬಾಗಿಲು ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.00 | | ಕಾಮಗಾರಿ ಮುಕ್ತಾಯ ಹಂತದಲ್ಲಿದೆ. |
| 3 | ಉಡುಪಿ | ಬೈಂದೂರು | ಬೈಂದೂರು | ಹೆಮ್ಮಾಡಿ ಗ್ರಾಮದ ಕಟ್ಟು ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.80 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 4 | ಉಡುಪಿ | ಬೈಂದೂರು | ಬೈಂದೂರು | ತ್ರಾಸಿ ಗ್ರಾಮದ ಮೊವಾಡಿ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.40 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 5 | ಉಡುಪಿ | ಬೈಂದೂರು | ಬೈಂದೂರು | ತ್ರಾಸಿ ಗ್ರಾಮದ ಕೊಡಕುಂಜ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.70 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 6 | ಉಡುಪಿ | ಬೈಂದೂರು | ಬೈಂದೂರು | ತ್ರಾಸಿ ಗ್ರಾಮದ ಕಳವಿನಬಾಗಿಲು ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.20 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 7 | ಉಡುಪಿ | ಬೈಂದೂರು | ಬೈಂದೂರು | ಕಂಚನೂರು ಗ್ರಾಮದ ಬಾಡಿ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.75 | | ಕಾಮಗಾರಿ ಮುಕ್ತಾಯ ಹಂತದಲ್ಲಿದೆ |
| 8 | ಉಡುಪಿ | ಬೈಂದೂರು | ಬೈಂದೂರು | ಚಿತ್ತೂರು ಗ್ರಾಮದ ನೈಕಂಬಳ್ಳಿ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.40 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 9 | ಉಡುಪಿ | ಬೈಂದೂರು | ಬೈಂದೂರು | ಕನ್ಯಾನ ಗ್ರಾಮದ ತೊಪ್ಲುಂಬೈಲು ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.25 | | ಕಾಮಗಾರಿ ಪ್ರಗತಿಯಲ್ಲಿದೆ |
| 10 | ಉಡುಪಿ | ಬೈಂದೂರು | ಬೈಂದೂರು | ನಾಡಾ ಗ್ರಾಮದ ಚಿಕ್ಕಳ್ಳಿ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.60 | | ಕಾಮಗಾರಿ ಪ್ರಗತಿಯಲ್ಲಿದೆ |
| 11 | ಉಡುಪಿ | ಬೈಂದೂರು | ಬೈಂದೂರು | ನಾಡಾ ಗ್ರಾಮದ ಮುಂಗಿಗುಡ್ಡ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.00 | | ಕಾಮಗಾರಿ ಪ್ರಗತಿಯಲ್ಲಿದೆ |
| 12 | ಉಡುಪಿ | ಬೈಂದೂರು | ಬೈಂದೂರು | ನಾಡಾ ಗ್ರಾಮದ ಘಟೇರಿ ಮನೆ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.20 | | ಕಾಮಗಾರಿ ಪ್ರಗತಿಯಲ್ಲಿದೆ |
| 13 | ಉಡುಪಿ | ಬೈಂದೂರು | ಬೈಂದೂರು | ಬಡಾಕೆರೆ ಗ್ರಾಮದ ಕಳವಿನಬಾಗಿಲು ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.50 | | ಕಾಮಗಾರಿ ಪ್ರಗತಿಯಲ್ಲಿದೆ |
| 14 | ಉಡುಪಿ | ಬೈಂದೂರು | ಬೈಂದೂರು | ಬೆಳ್ಳಾಲ ಗ್ರಾಮದ ಹಡನಗುಂಡಿ ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.30 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 15 | ಉಡುಪಿ | ಬೈಂದೂರು | ಬೈಂದೂರು | ಬೆಳ್ಳಾಲ ಗ್ರಾಮದ ಹುಲಿಯಮ್ಮ ದೇವಸ್ಥಾನ ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 16 | ಉಡುಪಿ | ಬೈಂದೂರು | ಬೈಂದೂರು | ಪಡುವರಿ ಗ್ರಾಮದ ತಾರಾಪತಿ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 49.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 17 | ಉಡುಪಿ | ಬೈಂದೂರು | ಬೈಂದೂರು | ಪಡುವರಿ ಗ್ರಾಮದ ಅಳಿವೆಕೋಡಿ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 18 | ಉಡುಪಿ | ಬೈಂದೂರು | ಬೈಂದೂರು | ಕಂಬದಕೋಣೆ ಗ್ರಾಮದ ನಲ್ಲಾತ್ತಾಣೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 19 | ಉಡುಪಿ | ಬೈಂದೂರು | ಬೈಂದೂರು | ಬಿಜೂರು ಗ್ರಾಮದ ಶಾರದ ಬಿಜೂರು ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 48.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 20 | ಉಡುಪಿ | ಬೈಂದೂರು | ಬೈಂದೂರು | ತಲ್ಲೂರು ಗ್ರಾಮದ ಸಬ್ಲಾಡಿ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ. | 10.00 | | ಕಾಮಗಾರಿ ಪ್ರಗತಿಯಲ್ಲಿದೆ |
| 21 | ಉಡುಪಿ | ಬೈಂದೂರು | ಬೈಂದೂರು | ಹಲ್ನಾಡು ಗ್ರಾಮದ ಹಲ್ನಾಡು ಕೆರೆ ಅಭಿವೃದ್ಧಿ ಕಾಮಗಾರಿ. | 10.00 | | ಕಾಮಗಾರಿ ಪ್ರಗತಿಯಲ್ಲಿದೆ |
| 22 | ಉಡುಪಿ | ಬೈಂದೂರು | ಬೈಂದೂರು | ತಲ್ಲೂರು ಗ್ರಾಮದ ಮಾರನಮನೆ ನದಿದಂಡೆ ಸಂರಕ್ಷಣಾ ಕಾಮಗಾರಿ | 200.00 | | ಅಂದಾಜುಪಟ್ಟಿ ತಯಾರಿಕಾ ಹಂತದಲ್ಲಿ. |
| | | | | | 1150.60 | | |
| 1 | ಉಡುಪಿ | ಹೆಬ್ರಿ | ಕಾರ್ಕಳ | ಅಂಡಾರು ಗ್ರಾಮದ ಬೈಲಿನ ತೋಡು ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 30.00 | | ಕಾಮಗಾರಿ ಪ್ರಗತಿಯಲ್ಲಿದೆ |
| 2 | ಉಡುಪಿ | ಹೆಬ್ರಿ | ಕಾರ್ಕಳ | ಅಂಡಾರು ಗ್ರಾಮದ ಗಣಪತಿ ಶೇರ್ವೆಗಾರ್ ಮನೆ ಹತ್ತಿರ ನದಿದಂಡೆ ಅಭಿವೃದ್ಧಿ ಕಾಮಗಾರಿ. | 50.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 3 | ಉಡುಪಿ | ಹೆಬ್ರಿ | ಕಾರ್ಕಳ | ರೆಂಜಾಳ ಗ್ರಾಮದ ಅರ್ಬಿತ್ತಿಲ್ ಮುಟ್ಟ ಆಚಾರಿಯವರ ಮನೆ ಬಳಿ ತೋಡು ಅಭಿವೃದ್ಧಿ ಕಾಮಗಾರಿ. | 38.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 4 | ಉಡುಪಿ | ಕಾರ್ಕಳ | ಕಾರ್ಕಳ | ಈದು ಗ್ರಾಮದ ಪಾಲಡ್ಕ ಎಂಬಲ್ಲಿ ರಾಜು ಪೂಜಾರಿಯವರ ತೋಟದ ಬಳಿ ಹೊಳೆಗೆ ತಡೆಗೋಡೆ ರಚನೆ | 47.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 5 | ಉಡುಪಿ | ಕಾರ್ಕಳ | ಕಾರ್ಕಳ | ಇನ್ನಾ ಗ್ರಾಮದ ಕಾಜೂರು ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 40.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 6 | ಉಡುಪಿ | ಕಾರ್ಕಳ | ಕಾರ್ಕಳ | ರೆಂಜಾಳ ಗ್ರಾಮದ ಮನ್ನೆದಡಿ ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 35.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 7 | ಉಡುಪಿ | ಕಾರ್ಕಳ | ಕಾರ್ಕಳ | ಈದು ಗ್ರಾಮದ ಹೊಸ್ಮಾರು ಸುಬ್ಬಿನಡೆ ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 49.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 8 | ಉಡುಪಿ | ಕಾರ್ಕಳ | ಕಾರ್ಕಳ | ಕುಕ್ಕುಂದೂರು ಗ್ರಾಮದ ಪರಪು ಬಳಿ ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 40.50 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| 9 | ಉಡುಪಿ | ಕಾರ್ಕಳ | ಕಾರ್ಕಳ | ಇನ್ನಾ ಗ್ರಾಮದ ದಾಸಕಟ್ಟ ನಾಗಬನ ಬಳಿ ತೋಡಿಗೆ ತಡೆಗೋಡೆ ರಚನೆ | 20.00 | | ಕಾಮಗಾರಿ ಪ್ರಗತಿಯಲ್ಲಿದೆ |
| 10 | ಉಡುಪಿ | ಕಾರ್ಕಳ | ಕಾರ್ಕಳ | ನಿಟ್ಟೆ ಗ್ರಾಮದ ಅಸರಬೆಟ್ಟು ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 42.50 | | ಕಾಮಗಾರಿ ಪ್ರಗತಿಯಲ್ಲಿದೆ |
| 11 | ಉಡುಪಿ | ಕಾರ್ಕಳ | ಕಾರ್ಕಳ | ರೆಂಜಾಳ ಗ್ರಾಮದ ಮಠ ಎಂಬಲ್ಲಿ ತೋಡಿಗೆ ತಡೆಗೋಡೆ ರಚನೆ | 25.00 | | ಕಾಮಗಾರಿ ಭೌತಿಕವಾಗಿ ಪೂರ್ಣಗೊಂಡಿದೆ |
| | | | | | 418.50 | | |
| 64 | | | | ಒಟ್ಟು ಉಡುಪಿ ಜಿಲ್ಲೆ | 6502.06 | | |

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1116ಕ್ಕೆ ಅನುಬಂಧ-1

2019-20ನೇ ಸಾಲಿನಲ್ಲಿ ನದಿದಂಡೆ ಸಂರಕ್ಷಣೆ ಕಾಮಗಾರಿಯಡಿ ಸ್ವೀಕರಿಸಿರುವ ಮನವಿಗಳ ವಿವರ.

| ಕ್ರ.ಸಂ. | ಕಾಮಗಾರಿಯ ಹೆಸರು | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಪ್ರಸ್ತಾಪಿಸಿದವರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಕೋಟೆಗ್ರಾಮ ಪಂಚಾಯತ್ ವ್ಯಾಪ್ತಿಯ ಪರಂಗಿಕುದ್ರು ಬೋಜ ಅಂಚನ್‌ರವರ ಮನೆಯಿಂದ ರತಿ ಪೂಜಾರ್ತಿ ಮನೆತನಕ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 30.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 2 | ಕೋಟೆಗ್ರಾಮ ಪಂಚಾಯತ್ ವ್ಯಾಪ್ತಿಯ ಬಿಂದಿಗ ಅಪ್ಪಿ ಸುವರ್ಣ ಮನೆಯಿಂದ ಜೋಸೆಫ್ ಡಿ ಅಲ್ಮೇಡರವರ ಮನೆತನಕ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 20.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 3 | ಕೋಟೆ ಗ್ರಾಮ ಪಂಚಾಯತ್ ಪರಂಗಿ ಕುದ್ರು ಎಂಬಲ್ಲಿ ತುರ್ಕು ನದಿ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 20.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 4 | ಉಳಿಯಾರಗೋಳಿ ಗ್ರಾಮದ 1ನೇವಾರ್ಡ್ ಕೈಪುಂಜಾಲು ಪಡುತೋಟದ ಬಳಿ ತುರ್ಕು ನದಿ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 20.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 5 | ಉದ್ಯಾವರ ಗ್ರಾಮದ ಪಂಚಾಯತ್ ಕಡೆತೋಟ ಶ್ರೀ ಭುವನೇಶ್ವರಿ ಭಜನಾ ಮಂದಿರದ ಹತ್ತಿರ ತುರ್ಕು ನದಿ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 40.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 6 | ಉದ್ಯಾವರ ಗ್ರಾಮ ಪಂಚಾಯತ್ ಕಕ್ಕೆದಾರ್ ಎಂಬಲ್ಲಿ ತೋಡು ಅಭಿವೃದ್ಧಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 7 | ಕಾಪು ಪಡು ಗ್ರಾಮದ ರಾಮನಗರ ಎಂಬಲ್ಲಿ ತೋಡು ಅಭಿವೃದ್ಧಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 8 | ಕೋಟೆ ಗ್ರಾಮದ ಮಟ್ಟು ಬಳಿ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 2,500.00 | ಶ್ರೀ ಲಾಲಾಜಿ. ಆರ್ ಮೆಂಡನ್ , ಮಾನ್ಯ ಶಾಸಕರು ಕಾಪು ವಿಧಾನ ಸಭಾ ಕ್ಷೇತ್ರ |
| 9 | ಪಡುಬಿದ್ರೆ ಗ್ರಾಮ ಪಂಚಾಯತ್ ವ್ಯಾಪ್ತಿಯ ಪಡುಹಿತ್ಲು ಕೊಳದಿಂದ ಕಾಮಿನಿ ನದಿಗೆ ಹೋಗುವ ತೋಡು ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಲಾಲಾಜಿ. ಆರ್. ಮೆಂಡನ್, ಮಾನ್ಯ ಶಾಸಕರು, ಕಾಪು ವಿಧಾನ ಸಭಾ ಕ್ಷೇತ್ರ |
| 10 | ಕಾಪು ಪುರಸಭೆ ವ್ಯಾಪ್ತಿಯ 11ನೇ ಲೈಟ್ ಹೌಸ್ ವಾರ್ಡಿನ ಹತ್ತಿರ ತೋಡಿನ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು. |
| 11 | ಅಲೆವೂರು ಪಂಚಾಯತ್ ವ್ಯಾಪ್ತಿಯ ಕೆಮ್ಮಣ್ಣು ಗ್ರಾಮದ ಜಲಜ ಪೂಜಾರ್ತಿ ಮನೆ ಬಳಿ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 30.00 | ಸಾರ್ವಜನಿಕರು |
| 12 | ಕೋಟೆ ಗ್ರಾ.ಪಂ, ಪರಂಗಿ ಕುದ್ರು ಬೋಜ ಅಂಚನ್ ಹಾಗೂ ಉಳಿಯಾರಗೋಳಿ ಗ್ರಾಮದ 1 ನೇ ವಾರ್ಡ್ ಕೈಪುಂಜಾಲು ಪಡುತೋಟದಲ್ಲಿ ಬೋಜ ಪೂಜಾರಿ ಮನೆ ಬಳಿ ಹಾಗೂ ಉದ್ಯಾವರ ಗ್ರಾ.ಪಂ, ಕಡೆತೋಟ ಶ್ರೀ ಭುವನೇಶ್ವರಿ ಭಜನಾ ಮಂದಿರದ ಹತ್ತಿರ ನದಿ ದಂಡೆ ಸಂರಕ್ಷಣಾ ಕಾಮಗಾರಿ ಉದ್ಯಾವರ ಗ್ರಾ.ಪಂ, ಕಕ್ಕೆದಾರ್ ಹಾಗೂ ಪಡು ಗ್ರಾಮದ ರಾಮನಗರದ ತೋಡು ಅಭಿವೃದ್ಧಿ | ಉಡುಪಿ | ಕಾಪು | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 100.00 | ಶ್ರೀ ಲಾಲಾಜಿ ಆರ್ ಮೆಂಡನ್, ಮಾನ್ಯ ಶಾಸಕರು, ಕಾಪು ವಿಧಾನ ಸಭಾ ಕ್ಷೇತ್ರ |
| 13 | 11ನೇ ಲೈಟ್‌ಹೌಸ್ ವಾರ್ಡಿನ ಹತ್ತಿರ ತೋಡಿನ ಅಭಿವೃದ್ಧಿ ಕಾಮಗಾರಿ | ಉಡುಪಿ | ಕಾಪು | ಕಾಪು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು. |
| | ಒಟ್ಟು: | | | | | 2,930.00 | |
| 1 | ಕೋಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಸಾಸ್ತಾನ ಕೋಡಿ ಬ್ರಿಡ್ಜ್ ಬಳಿ ಹಿಲ್ಡಾ ಕೆಸ್ತೋಲಿನ್ ಮನೆಯಿಂದ ಉತ್ತರಕ್ಕೆ ಸುಮಾರು 1500.00 ಕಿ.ಮೀ ಉದ್ದಕ್ಕೆ ಪಾರಂಪಳ್ಳಿ ಗಡಿಯ ತನಕ ನದಿದಂಡೆ ಸಂರಕ್ಷಣಾ ಕಾಮಗಾರಿ. | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 340.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ. ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 2 | ಇಂದ್ರಾಣಿ ಹೊಳೆಗೆ ಕಲ್ಸಂಕದಿಂದ ಮಠದಬೆಟ್ಟುವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 3 | ಇಂದ್ರಾಣಿ ಹೊಳೆಗೆ ಮಠದಬೆಟ್ಟುವರೆಗೆ ನಾಗಬನದವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 4 | ಹಾರಾಡಿ ಗ್ರಾಮದ ಹೊನ್ನಾಳ ಎಂಬಲ್ಲಿ ಸ್ವರ್ಣ ನದಿಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |

| ಕ್ರ.ಸಂ. | ಕಾಮಗಾರಿಯ ಹೆಸರು | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಮೊತ್ತ ರೂ. ಲಕ್ಷಗಳಲ್ಲಿ | ಪ್ರಸ್ತಾಪಿಸಿದವರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 5 | ಕೊಡವೂರು ಗ್ರಾಮ ಕಲ್ಮಾಡಿ ಎಂಬಲ್ಲಿ ಇಂದ್ರಾಣಿ ನದಿಗೆ ಪೌಲ್ ಫೆರ್ನಾಂಡಿಸ್ ಮನೆಯಿಂದ ಅಪ್ಪಿ ಸುವರ್ಣ ರವರ ಮನೆ ವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 6 | ಕೊಡವೂರು ಗ್ರಾಮದ ಕಲ್ಮಾಡಿ ಎಂಬಲ್ಲಿ ಹೊಸಕಟ್ಟ ಚಕ್ಕಪಾದೆಯಿಂದ ಅಪ್ಪಿ ಮನೆಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 7 | ಕೊಡವೂರು ಗ್ರಾಮದ ಕಲ್ಮಾಡಿ ಎಂಬಲ್ಲಿ ಬ್ರಹ್ಮ ಬೈದರ್ಕಳ ಗರಡಿಯಿಂದ ಬೊಬ್ಬು ಪಂಜುರ್ಲಿ ದೈವಸ್ಥಾದವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 8 | ಕೊಡವೂರು ಗ್ರಾಮದ ಕಲ್ಮಾಡಿ ಮಾರಿಗುಡಿಯಿಂದ ಕಲ್ಯಾಣಿ ಪುಜಾರ್ತಿ ಮನೆಯುವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 9 | ಕೊಡವೂರು ಗ್ರಾಮದ ಕಲ್ಮಾಡಿ ಕುಟುಂಬಸ್ಥರ ಮನೆಯಿಂದ ಜನನ್ನಾಥ ಪುಜಾರಿ ಮನೆಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 10 | ಹಾರಾಡಿ ಗ್ರಾಮ ಪಂಚಾಯತ್ ಪಡುಬೈಕಾಡಿ ಎಂಬಲ್ಲಿ ಸ್ವರ್ಣ ನದಿಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 11 | ಹಾರಾಡಿ ಗ್ರಾಮ ಪಂಚಾಯತ್‌ನ ಮುಂಡಾಡಿಬೆಟ್ಟು ಅರುಣ್ ಭಂಡಾರಿ ಮನೆಯಿಂದ ದೊಡ್ಡ ತೋಡಿನವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 12 | ಅಂಬಲಪಾಡಿ ಗ್ರಾಮದ ಮಜ್ಜಿಗೆ ಪಾದೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 13 | ಕಲ್ಯಾಣಪುರ ಗ್ರಾಮದ ಮೂಡುತೋನ್ಸೆ ಸಸಿತೋಟ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 14 | ತೆಂಕನಿಡಿಯೂರು ಗ್ರಾಮದ ಬ್ರಹ್ಮಲಿಂಗೇಶ್ವರ ದೇವಸ್ಥಾನದಿಂದ ಗೋದು ಪುಜಾರ್ತಿ ಮನೆಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 15 | ಪಡುತೋನ್ಸೆ ಗ್ರಾಮದ ಕಂಬಳ ತೋಟ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 16 | ಕಲ್ಯಾಣಪುರ ಗ್ರಾಮದ ಮೂಡುಕುದ್ರು ಸೇತುವೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 17 | ಹೊಡೆ ಗ್ರಾಮದ ಪರ್ಲಕಡೆ ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 18 | ನೀಲಾವರ ಗ್ರಾಮ ಪಂಚಾಯತ್ ವ್ಯಾಪ್ತಿಯ ದೇವಾಡಿಗರ ಬೆಟ್ಟು ಎಂಬಲ್ಲಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 19 | ಮಂಚಿಕೋಡಿ ಹೊಸದರ್ಗ ಮಂಚಿ ಮೂಲಸ್ಥಾನ ಬಳಿಯಿಂದ ಗೋಪಾಲ ಪೂಜಾರಿ ಮನೆಯವರೆಗೆ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 20 | ಆರೂರು ಗ್ರಾಮದ ದೇವಸ್ಥಾನಬೆಟ್ಟು ದೇವಸ್ಥಾನದ ಹಿಂಬದಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 21 | ಹಾರಾಡಿ ಗ್ರಾಮದ ಕೃಷ್ಣಪ್ಪ ಅಮೀನ್ ಮನೆ ಬಳಿ ನದಿದಂಡೆ ಅಭಿವೃದ್ಧಿ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 22 | ಕಲ್ಯಾಂಕ ಗ್ರಾಮದ ಗೊಂಡಿಬೈಲಿನ ನಾಗಬನದ ಬಳಿ ತೋಡಿಗೆ ಎರಡೂ ಬದಿ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 25.00 | ಶ್ರೀ ಕೆ. ರಘುಪತಿ ಭಟ್, ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ |
| 23 | ಪಾದೆಬೆಟ್ಟು ಗ್ರಾಮದ ಮುಗಿಲಕೋಡಿ ಎಂಬಲ್ಲಿ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 20.00 | ಸಾರ್ವಜನಿಕರು |
| 24 | ಪಾದೆಬೆಟ್ಟು ಗ್ರಾಮದ ವಿಷ್ಣುಮೂರ್ತಿ ದೇವಸ್ಥಾನದ ಎದುರು ಹರಿಯುವ ಕಾಮಿನಿ ಹೊಳೆಗೆ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |

| ಕ್ರ.ಸಂ. | ಕಾಮಗಾರಿಯ ಹೆಸರು | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಪ್ರಸ್ತಾಪಿಸಿದವರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 25 | ಬಾರ್ಕೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಹೊಸಾಳ ಗ್ರಾಮದ ನಾಗರಮಠ ಕಿಂಡಿ ಅಣೆಕಟ್ಟಿನಿಂದ ಅತ್ತಿಬೈಲು ರಾಮ ಮರಕಾಲರ ಮನೆಯವರೆಗೆ (ನಾಗಮಠ ಭಟ್ರ ಕಟ್ಟೆಯವರೆಗೆ) ನದಿ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 200.00 | ರನೇ ಬಾರಕೂರು ಗ್ರಾಮ ಪಂಚಾಯತ್ ಬಾರಕೂರು, ಉಡುಪಿ ತಾಲೂಕು. |
| 26 | ಶಿರಿಯಾರ ಗ್ರಾಮದ ಜಡ್ಡಿನಕಟ್ಟು (ಶಾಂಗಡಿ ಹತ್ತಿರ) ಎಂಬಲ್ಲಿ ಕಿಂಡಿಅಣೆಕಟ್ಟು ಅಭಿವೃದ್ಧಿ ಕಾಮಗಾರಿ. | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 20.00 | ಸಾರ್ವಜನಿಕರು |
| 27 | ಕಡಿಯಾಳಿ ವಾರ್ಡಿನ ಸಗ್ರಿ ಗೋಪಾಲ ನಾಯಕ್ ರವರ ಮನೆಬಳಿಯಿಂದ ಗುಂಡಿಬೈಲು ನಾಗಬನದವರೆಗೆ ಆಯ್ದ ಭಾಗಗಳಲ್ಲಿ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |
| 28 | ಕೆಡವೂರು ಗ್ರಾಮದ ಮೂಡುಬೆಟ್ಟು ವಾರ್ಡಿನ ಕೃಷ್ಣಪ್ಪ ಪೂಜಾರಿಯವರ ಮನೆಯಿಂದ ಮುದ್ದು ಶೆಟ್ಟಿಯವರ ಮನೆಯವರೆಗೆ ನದಿದಂಡೆ ಸಂರಕ್ಷಣಾ ಕಾಮಗಾರಿಗೆ ಅನುದಾನ ಒದಗಿಸುವ ಕುರಿತು | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಮಾನ್ಯ ಶಾಸಕರು, ಉಡುಪಿ ವಿಧಾನ ಸಭಾ ಕ್ಷೇತ್ರ ಹಾಗೂ ಜಿಲ್ಲಾಧಿಕಾರಿಗಳು ದೂರವಾಣಿ ಮೂಲಕ ಆದೇಶಿಸಿದಂತೆ |
| 29 | ಆದೂರು ಗ್ರಾಮದ ಉಗ್ಗೇಲ್ ಬೆಟ್ಟು ಎಂಬಲ್ಲಿ ಉಪ್ಪು ನೀರು ತಡೆ ಅಣೆಕಟ್ಟಿಗೆ ಸೂಕ್ತವಾದ ನದಿ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಸಾರ್ವಜನಿಕರು |
| 30 | ಕೊಕ್ಕರ್ಣೆ ಗ್ರಾಮದ ಯಾಪಿಕಡು ಕಿಟಿಡಿ ಅಣೆಕಟ್ಟಿನ ಎಡದಂಡೆ ಮತ್ತು ಬಲದಂಡೆ ಮೇಲ್ಪ್ರವಾಹ ಹಾಗೂ ಕೆಳಪ್ರವಾಹ ತಡೆಗೋಡೆ ನಿರ್ಮಾಣದ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 100.00 | ಸಾರ್ವಜನಿಕರು |
| 31 | ಮೂಡುತೋನ್ಸೆ ಗ್ರಾಮದ ಕಲ್ಯಾಣಪುರ ಸುರೇಂದ್ರ ಪೂಜಾರಿ ಮನೆಯಿಂದ ಮಿಲ್‌ರೋಡ್ ತುಳಸಿ ಕಟ್ಟೆಯವರೆಗೆ ಸ್ವರ್ಣ ನದಿಗೆ ನದಿದಂಡೆ ಸಂರಕ್ಷಣಾ ಕಾಮಗಾರಿಗೆ ಅನುದಾನ ಒದಗಿಸುವ ಕುರಿತು | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 60.00 | ಮಾನ್ಯ ಶಾಸಕರು, ಉಡುಪಿ ವಿಧಾನಸಭಾ ಕ್ಷೇತ್ರ ಇವರ ಮೌಖಿಕ ಆದೇಶದ ಮೇರೆಗೆ |
| 32 | ಮೂಡುತೋನ್ಸೆ ಗ್ರಾಮದ ಕಲ್ಯಾಣಪುರದ ವಾಲ್ಟರ್ ರವರ ಮನೆಯಿಂದ ಕಳುವಿನ ಬಾಗಿಲು ಭಜನಾ ಮಂದಿರದವರೆಗೆ ನದಿದಂಡೆ ಸಂರಕ್ಷಣಾ ಕಾಮಗಾರಿಗೆ ಅನುದಾನ ಒದಗಿಸುವ ಕುರಿತು | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 80.00 | ಮಾನ್ಯ ಶಾಸಕರು, ಉಡುಪಿ ವಿಧಾನಸಭಾ ಕ್ಷೇತ್ರ ಇವರ ಮೌಖಿಕ ಆದೇಶದ ಮೇರೆಗೆ |
| 33 | ಕೊಡವೂರು ಗ್ರಾಮದ ಮೂಡುಬೆಟ್ಟು ವಾರ್ಡಿನ ಕೃಷ್ಣಪ್ಪ ಪೂಜಾರಿಯವರ ಮನೆಯಿಂದ ಮುದ್ದು ಶೆಟ್ಟಿಯವರ ಮನೆಯವರೆಗೆ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿಭಟ್, ಮಾನ್ಯ ಶಾಸಕರು ಉಡುಪಿ ವಿಧಾನಸಭಾ ಕ್ಷೇತ್ರ |
| 34 | ಕೊಡವೂರು ಗ್ರಾಮದ ಮೂಡುಬೆಟ್ಟು ವಾರ್ಡಿನ ಚರ್ಚಿನ ಹಿಂಬದಿ ಕಟ್ಟಡ ಮನೆ ಶ್ರೀ ನಾಗಬನದಿಂದ ಕೃಷ್ಣಪ್ಪ ಪೂಜಾರಿಯವರ ಮನೆಯವರೆಗೆ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಉಡುಪಿ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೆ. ರಘುಪತಿಭಟ್, ಮಾನ್ಯ ಶಾಸಕರು ಉಡುಪಿ ವಿಧಾನಸಭಾ ಕ್ಷೇತ್ರ |
| 35 | ಗಿಳಿಯಾರು ಗ್ರಾಮದ ಹಾಡಿಕೆರೆ ಸೂಲಡ್ಪು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 36 | ಗಿಳಿಯಾರು ಗ್ರಾಮದ ಕಲ್ಲಟ್ಟೆ ಸೂಲಡ್ಪು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 37 | ಗಿಳಿಯಾರು ಗ್ರಾಮದ ಹರ್ತಟ್ಟು ಸೂಲಡ್ಪು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 38 | ಮಣೂರು ಗ್ರಾಮದ ಕ್ಯೊಕೂರು ಸೂಲಡ್ಪು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 39 | ಮಣೂರು ಗ್ರಾಮದ ದ್ಯಾವಸ ಸೂಲಡ್ಪು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |

| ಕ್ರ.ಸಂ. | ಕಾಮಗಾರಿಯ ಹೆಸರು | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಪ್ರಸ್ತಾಪಿಸಿದವರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 40 | ಮಣೂರು ಗ್ರಾಮದ ಬಣ್ಣದ ಬಯಲು ಸೂಲ್ಪಡು ಹೊಳೆದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 41 | ಉಪ್ಪೂರು ಗ್ರಾಮದ ಮಾಯಾಡಿಯಲ್ಲಿ ಸ್ವರ್ಣ ನದಿಯ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 25.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 42 | ಕೋಡಿ ಗ್ರಾಮದ, ಶ್ರೀ ದುರ್ಗಾದೇವಿ ಮಹಾಕಾಳಿ ಅಮ್ಮನವರ ದೇವಸ್ಥಾನದ ಸಮೀಪ ಕೋಡಿಬೆಂಗ್ರೆಯ ಸ.ನಂ.86 ಪೂರ್ವ ದಿಕ್ಕಿನ ನದಿ ತೀರದಲ್ಲಿ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 43 | ವಡ್ಡರ್ಸೆ ಗ್ರಾಮದ ಕಾವಡಿ ಸಂಪಾವತಿ ಶೆಡ್ತಿ ಇವರ ಗದ್ದೆ ಬಳಿ ತುರ್ತು ಶಾಶ್ವತ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 49.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 44 | ಬನ್ನಾಡಿ ಗ್ರಾಮದ ಸೀತಾರಾಮ ಶೆಟ್ಟಿ ಮನೆ ಬಳಿ ಹೀರೆಹೊಳೆಗೆ ತುರ್ತು ಶಾಶ್ವತ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 46.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 45 | ಕಾವಡಿ ಗ್ರಾಮದ ಮಾವಂಬಳ್ಳಿ ದಾರಯ್ಯ ಶೆಟ್ಟಿ ಮನೆ ಬಳಿ ತುರ್ತು ಶಾಶ್ವತ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 45.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 46 | ಕೋಡಿ ಗ್ರಾಮದ, ಶ್ರೀ ದುರ್ಗಾದೇವಿ ಮಹಾಕಾಳಿ ಅಮ್ಮನವರ ದೇವಸ್ಥಾನದ ಸಮೀಪ ಕೋಡಿಬೆಂಗ್ರೆಯ ಸ.ನಂ.86 ಪೂರ್ವ ದಿಕ್ಕಿನ ನದಿ ತೀರದಲ್ಲಿ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಕೋಟ ಶ್ರೀನಿವಾಸ ಪೂಜಾರಿ, ಮಾನ್ಯ ಮುಜರಾಯಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ದಕ್ಷಿಣ ಕನ್ನಡ ಜಿಲ್ಲಾ ಉಸ್ತುವಾರಿ ಸಚಿವರು |
| 47 | ಮಣೂರು ಗ್ರಾಮದ ಕಾಲುವೆಯನ್ನು ದುರಸ್ಥಿ ಕಾಮಗಾರಿ | ಉಡುಪಿ | ಬ್ರಹ್ಮಾವರ | ಉಡುಪಿ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಕೆ. ಜಯಪ್ರಕಾಶ ಹೆಗ್ಡೆ, ಮಾಜಿ ಲೋಕಸಭಾ ಸದಸ್ಯರು ಹಾಗೂ ಮಾಜಿ ಸಚಿವರು. |
| 47 | | | | | | 2,440.00 | |
| 1 | ಹಂಗಳೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಗಡಿಯಾರು ಹಿತ್ಲು ಬಚ್ಚ ಪೂಜಾರಿ ಮನೆಯ ಹತ್ತಿರದಿಂದ ಹೊಂಡದ ಮನೆ ಕಾಳು ಪೂಜಾರಿ ಮನೆಯವರ ನದಿ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 49.50 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 2 | ಹೆಗ್ಗುಂಜೆ ಗ್ರಾಮ ಪಂಚಾಯತ್ ವ್ಯಾಪ್ತಿಯ ಶಿರೂರು ಗ್ರಾಮದ ಹೊಳೆಬಾಗಿಲು ಗರಡಿ ಸೀತಾನದಿ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 3 | ಸೂರ್ಗೋಳಿ ಮಿಯ್ಯಾರು ಸೀತಾನದಿ ಲಕ್ಷ್ಮೀ ನಾರಾಯಣ ಹಾಲಂಬಿ ತೋಟದ ಹತ್ತಿರ ನದಿ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 4 | ಹಾರ್ದಳ್ಳಿ-ಮಂಡಳ್ಳಿ ಗ್ರಾಮದ ಕೊಳನಕಲ್ ರೋಡಿನಲ್ಲಿ ಅಡ್ಡಲಾಗಿ ಹರಿಯುವ ನದಿಗೆ ಕಟ್ಟಲಾದ ಸೇತುವೆಯ ಎರಡು ಬದಿಗೆ ತಡೆಗೋಡೆ ನಿರ್ಮಾಣ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 5 | ಆನಗಳ್ಳಿ ಗ್ರಾಮದ ಪಂಚಾಯತ್ ವ್ಯಾಪ್ತಿಯ ಎರಡನೇ ವಾರ್ಡಿನ ತಪ್ಪಲು ಬಾಗದಲ್ಲಿ ತಡೆಗೋಡೆ ರಚನೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 6 | ರಟ್ಟಾಡಿ ಗ್ರಾಮದ ಕಕ್ಕೋಡು ಹಕ್ಲಮನೆಯ ಹತ್ತಿರ ಹಾಗೂ ಕಕ್ಕೋಡು ಲಚ್ಚಮ್ಮ ಶೆಡ್ತಿಯವರ ಮನೆಯ ಹತ್ತಿರ ಬದಿ ಕಟ್ಟುವುದು | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 7 | ಕೋಟೇಶ್ವರ ಗ್ರಾಮ ಪಂಚಾಯತ್ ವ್ಯಾಪ್ತಿಯ 6ನೇ ವಾರ್ಡ್ ನಾಗರಜ ಶ್ರೀಯಾನ್ ಮನೆಯ ಹತ್ತಿರ ಸಿಹಿನೀರು ತೋಡಿಗೆ ತಡೆಗೋಡೆ ರಚನೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 40.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 8 | ಕೋಟೇಶ್ವರ ಗ್ರಾಮ ಪಂಚಾಯತ್ ವ್ಯಾಪ್ತಿಯ ಕೋಣಿ ಹತ್ತಿರ ಸುಮನ ಪೂಜಾರಿ ಮನೆಯ ಹತ್ತಿರ ಹರಿಯುವ ನೀರಿಗೆ ತಡೆಗೋಡೆ ರಚನೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |

| ಕ್ರ.ಸಂ. | ಕಾಮಗಾರಿಯ ಹೆಸರು | ಜಿಲ್ಲೆ | ತಾಲೂಕು | ವಿಧಾನ ಸಭಾ ಕ್ಷೇತ್ರ | ಲೆಕ್ಕ ಶೀರ್ಷಿಕೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಪ್ರಸ್ತಾವಿಸಿದವರು |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 9 | ಕೋಟೇಶ್ವರ ಗ್ರಾಮ ಪಂಚಾಯತ್ ವ್ಯಾಪ್ತಿಯ ಮಾರ್ಕೋಡು ಹಾಗೂ ಹಣಕೋಡು ಬೈಲು ಮಧ್ಯದಿಂದ ಬೃಹತ್ ನೀರು ಹರಿಯುವ ತೋಡಿಗೆ ಬದಿ ಕಟ್ಟುವುದು. | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 10 | ಸೀತಾನದಿ ಮಿಯ್ಯಾರು ಕಿಂಡಿಅಣೆಕಟ್ಟಿನ ಮಿಯ್ಯಾರು ಬದಿಯಲ್ಲಿ ಸೀತಾನದಿ ದಂಡೆ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 11 | ಬೆಳ್ವೆ ಗ್ರಾಮದ ಸುರ್ಗೋಳಿ ಎಂಬಲ್ಲಿ ಸೀತಾನದಿಗೆ ನದಿ ದಂಡೆ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 12 | ನಡೂರು ಗ್ರಾಮದ ಕಂಬದಗದ್ದೆ ಹತ್ತಿರ ಕಿಂಡಿ ಅಣೆಕಟ್ಟಿನ ಹಿಂದೆ ಮತ್ತು ಮುಂದೆ ಬದಿಕಟ್ಟುವುದು | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 15.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 13 | ಕೆದೂರು ಗ್ರಾಮದ ತೋಟದ ಮನೆಯ ಹತ್ತಿರ ಬದಿಕಟ್ಟುವುದು | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 10.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 14 | ಕೆದೂರು ಗ್ರಾಮದ ಕರಿಯ ಆಚಾರ್ಯ ಮನೆಯ ಹತ್ತಿರ ತೋಡಿಗೆ ಬದಿಕಟ್ಟುವುದು | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 15.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 15 | ಕಾಳಾವರ ಗ್ರಾಮಪಂಚಾಯತ್ ವ್ಯಾಪ್ತಿಯ ವಕ್ವಾಡಿ ಬಾಳ್ಕಟ್ಟು ಮನೆಯ ಹತ್ತಿರ ಹೊಳೆ ದಂಡೆ ಸಂರಕ್ಷಣೆ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 25.00 | ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ, ಮಾನ್ಯ ಶಾಸಕರು, ಕುಂದಾಪುರ ವಿಧಾನ ಸಭಾ ಕ್ಷೇತ್ರ, ಕಾರ್ಯಾಲಯ, ಕುಂದಾಪುರ. |
| 16 | ಬಿಜೂರು ಗ್ರಾಮದ ಸ.ನಂ. 71/4ರಲ್ಲಿ ಶ್ರೀಮತಿ ಶಾರದಾ ಬಿಜೂರು ಇವರ ಜಮೀನು ಬಳಿ ಸುಮನಾ ನದಿದಂಡೆಗೆ ಸಂರಕ್ಷಣಾ ಕಾಮಗಾರಿ | ಉಡುಪಿ | ಕುಂದಾಪುರ | ಕುಂದಾಪುರ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 100.00 | ಸಾರ್ವಜನಿಕರು |
| | ಒಟ್ಟು: | | | | | 664.50 | |
| 1 | ತಲ್ಲೂರು ಗ್ರಾಮದ ಮಾರಸಮನೆ ನದಿದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 150.00 | ಶ್ರೀ ಬಿ.ಎಮ್. ಸುಕುಮಾರ ಶೆಟ್ಟಿ, ಮಾನ್ಯ ಶಾಸಕರು, ಬೈಂದೂರು ವಿಧಾನ ಸಭಾ ಕ್ಷೇತ್ರ |
| 2 | ಅರೆಕಲ್ಲು ಮನೆ ಪ್ರದೇಶ, 5ನೇ ವಾರ್ಡ್ ಉಪ್ಪುಂದ, ಕೊಡೇರಿ ಅಳ್ವೆಯಿಂದ ಬರುವ ಉಪ್ಪುನೀರು ಹೊಳೆಗೆ ತಡೆಗೋಡೆ ಮತ್ತು ಒಡ್ಡು ನಿರ್ಮಿಸುವ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಅಪರ ಕಾರ್ಯದರ್ಶಿ, ಮುಜರಾಯಿ ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರ ಕಛೇರಿ. |
| 4 | ಪಡುವರಿ ಗ್ರಾಮದ ಹೊಳೆ ನೀರಿನ ರಭಸಕ್ಕೆ ನದಿದಂಡೆ ಕೊರೆತ ಉಂಟಾಗಿದ್ದು, ತಡೆಗೋಡೆ ನಿರ್ಮಿಸುವ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 4.00 | ಸಾರ್ವಜನಿಕರು |
| 5 | ಕಂಬದಕೋಣೆ ಗ್ರಾಮದ ನಲ್ಪತ್ತನೆ ಎಂಬಲ್ಲಿ ನದಿದಂಡೆ ದುರಸ್ಥಿಗೊಳಿಸುವ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |
| 6 | ಚಿತ್ತೂರು ಗ್ರಾಮದ ನೈಕಂಬಳ್ಳಿ ಹಿಂಡೆತ್ತು ಎಂಬಲ್ಲಿ ನದಿದಂಡೆ ದುರಸ್ಥಿಗೊಳಿಸುವ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |
| 7 | ಕಟ್ಟಾನ ಗ್ರಾಮದ ತೋಟಂಬೈಲು ಎಂಬಲ್ಲಿ ನದಿದಂಡೆ ದುರಸ್ಥಿಗೊಳಿಸುವ ಕಾಮಗಾರಿ | ಉಡುಪಿ | ಬೈಂದೂರು | ಬೈಂದೂರು | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |
| | ಒಟ್ಟು: | | | | | 354.00 | |
| 1 | ಅಂಡಾರು ಗ್ರಾಮದ ಬೈಲಿನ ತೋಡಿನ ದಂಡೆಗೆ ದಂಡೆ ಸಂರಕ್ಷಣಾ ಕಾಮಗಾರಿ | ಉಡುಪಿ | ಕಾರ್ಕಳ | ಕಾರ್ಕಳ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 25.00 | ಸಾರ್ವಜನಿಕರು |
| 2 | ಅಂಡಾರು ಗ್ರಾಮದ ಕೋಳಿಬೆಟ್ಟು ಹೊಳೆಗೆ ತೋಟದ ಮನೆ ಗಣಪತಿ ಶೇರ್ವೆಗಾರರ ಜಮೀನಿನ ಬಳಿ ತೋಡಿಗೆ ತಡೆಗೋಡೆ ನಿರ್ಮಾಣ ಕಾಮಗಾರಿ | ಉಡುಪಿ | ಕಾರ್ಕಳ | ಕಾರ್ಕಳ | 4711-ಪ್ರವಾಹ ನಿಯಂತ್ರಣ ಕಾಮಗಾರಿಗಳು | 50.00 | ಸಾರ್ವಜನಿಕರು |
| 2 | ಒಟ್ಟು: | | | | | 75.00 | |
| 85 | ಒಟ್ಟು ಉಡುಪಿ ಜಿಲ್ಲೆ: | | | | | 6,463.50 | |

ಕರ್ನಾಟಕ ಸರ್ಕಾರ

ಸಂಖ್ಯೆ:ಇಡಿ 79 ಡಿಸಿಇ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:10-03-2020
11

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ,
ಬೆಂಗಳೂರು.

70
U/S
16/3/20

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಶ್ರೀ ಎನ್.ಎ. ಹ್ಯಾರಿಸ್ (ಶಾಂತಿನಗರ), ಮಾನ್ಯ ವಿಧಾನ ಸಭಾ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 910 ಕ್ಕೆ ಉತ್ತರವನ್ನು ಒದಗಿಸುವ ಬಗ್ಗೆ.

ಉಲ್ಲೇಖ: ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.910/2020, ದಿನಾಂಕ:28-02-2020.

*******

ಶ್ರೀ ಎನ್.ಎ. ಹ್ಯಾರಿಸ್ (ಶಾಂತಿನಗರ), ಮಾನ್ಯ ವಿಧಾನ ಸಭಾ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 910 ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ಮುಂದಿನ ಕ್ರಮಕ್ಕಾಗಿ ಸಲ್ಲಿಸಿದೆ.

ತಮ್ಮ ನಂಬುಗೆಯ,

11-3-2020

(ಜೆ.ಟಿ. ವೆಂಕಟರಾಮ)
ಸರ್ಕಾರದ ಅಧೀನ ಕಾರ್ಯದರ್ಶಿ
ಉನ್ನತ ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 910 |
| ಸದಸ್ಯರ ಹೆಸರು | ಶ್ರೀ ಎನ್.ಎ. ಹ್ಯಾರಿಸ್ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | 10-03-2020 |
| ಉತ್ತರಿಸಬೇಕಾದ ಸಚಿವರು | ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |

| | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ಪದವಿ ಕಾಲೇಜುಗಳ ವಿದ್ಯಾರ್ಥಿಗಳಿಗೆ ಕಲಿಕೆಯ ಅವಧಿಯಲ್ಲಿಯೇ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸಿದ್ಧತೆ ಮಾಡಿಕೊಳ್ಳಲು ನೆರವಾಗುವ ಪರೀಕ್ಷಾ ತರಬೇತಿ ಸಂಯೋಜಿತ ಕೋರ್ಸ್ (ಇಂಟಿಗ್ರೇಟೆಡ್) ಅನುಷ್ಠಾನದ ಕುರಿತಾದ ವಿವರಗಳೇನು; | ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳು ಹಾಗೂ ಖಾಸಗಿ ಅನುದಾನಿತ ಕಾಲೇಜುಗಳು ಮಾತ್ರ ಅಧೀನದಲ್ಲಿರುತ್ತದೆ.<br><br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿನ ಸರ್ಕಾರಿ ಪದವಿ ಕಾಲೇಜುಗಳ ವಿದ್ಯಾರ್ಥಿಗಳಿಗೆ ಕಲಿಕೆಯ ಅವಧಿಯಲ್ಲಿಯೇ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಸಿದ್ಧತೆ ಮಾಡಿಕೊಳ್ಳಲು ನೆರವಾಗುವ ಪರೀಕ್ಷಾ ತರಬೇತಿ ಸಂಯೋಜಿತ ಕೋರ್ಸ್ (ಇಂಟಿಗ್ರೇಟೆಡ್) ಅನುಷ್ಠಾನಕ್ಕೆ ಸಂಬಂಧಿಸಿದಂತೆ ಯಾವುದೇ ಯೋಜನೆ / ಕಾರ್ಯಕ್ರಮಗಳು ಕಾಲೇಜು ಶಿಕ್ಷಣ ಇಲಾಖೆ ಹಂತದಲ್ಲಿ ಅನುಷ್ಠಾನಗೊಂಡಿರುವುದಿಲ್ಲ ಹಾಗೂ ಉದ್ದೇಶಿಸಿರುವುದಿಲ್ಲ. |
| ಆ) | ನಾಲ್ಕು ವರ್ಷಗಳ ಈ ಸಂಯೋಜಿತ ಕೋರ್ಸ್‌ಗೆ ನೆರವು ನೀಡುವ ಉದ್ದೇಶ ಹೊಂದಿರುವ ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತರಬೇತಿ ಸಂಸ್ಥೆಯನ್ನು ಆಯ್ಕೆ ಮಾಡುವ ಕುರಿತಾದ ಪ್ರಗತಿಯೇನು; ಎಷ್ಟು ತರಬೇತಿ ಸಂಸ್ಥೆಗಳು ಟೆಂಡರ್ ಪ್ರಕ್ರಿಯೆಯಲ್ಲಿ ಪಾಲ್ಗೊಂಡಿವೆ (ವಿವರ ನೀಡುವುದು); | |
| ಇ) | ಈ ಸದುದ್ದೇಶದ ಇಂಟಿಗ್ರೇಟೆಡ್ ಕೋರ್ಸ್ ಜಾರಿಗೆ ತರುವಲ್ಲಿನ ಟೆಂಡರ್ ಪ್ರಕ್ರಿಯೆಯನ್ನು ಚುರುಕುಗೊಳಿಸುವ ಹಾಗೂ ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡುವ ಯೋಜನಾನುಷ್ಠಾನದ ಜಾರಿಗಾಗಿ ಸರ್ಕಾರದ ತ್ವರಿತ ಕ್ರಮಗಳೇನು; | |

ಇಡಿ 79 ಡಿಸಿಇ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ)

## ಕರ್ನಾಟಕ ಸರ್ಕಾರ

ಸಂಖ್ಯೆ: ಗ್ರಾಅಪ/268/ಗ್ರಾಪಂಅ/2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:11-03-2020.

ಇಂದ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಪಂ.ರಾಜ್)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ,
**ಬೆಂಗಳೂರು.**

111
4/5
10/3/20

ಇವರಿಗೆ,

ಕಾರ್ಯದರ್ಶಿಗಳು,
ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 372 ಕ್ಕೆ ಉತ್ತರ.

**ಉಲ್ಲೇಕ** ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಸಭೆ ರವರ ಪತ್ರ ಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.372/2020 ದಿನಾಂಕ: 27-02-2020.

*****

ಕರ್ನಾಟಕ ವಿಧಾನ ಸಭೆ ಸದಸ್ಯರಾದ ಮಾನ್ಯ ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 372 ಕ್ಕೆ ಉತ್ತರದ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

B. Naveenkumar 11/03/2020
(ಬಿ. ನವೀನ್ ಕುಮಾರ್)
ಉಪನಿರ್ದೇಶಕರು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, (ಗ್ರಾ.ಪಂ.)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪ್ರತಿ:

ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ) ಗ್ರಾಅಪ ಇಲಾಖೆ. (5 ಪ್ರತಿಗಳು)

ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 372 |
| ಸದಸ್ಯರ ಹೆಸರು | : | ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್ (ದೇವನಹಳ್ಳಿ) |
| ಉತ್ತರಿಸುವ ದಿನಾಂಕ | : | 10-03-2020 (ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆಯಿಂದ ವರ್ಗಾವಣೆ) |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ | ದೇವನಹಳ್ಳಿ ವಿಧಾನ ಸಭಾ ಕ್ಷೇತ್ರದ ಅಣ್ಣೇಶ್ವರ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅನಧಿಕೃತ ಜಾಹಿರಾತು ಫಲಕಗಳನ್ನು ಅಳವಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಣ್ಣೇಶ್ವರ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅನಧಿಕೃತ ಜಾಹಿರಾತು ಫಲಕಗಳನ್ನು ಅಳವಡಿಸಿರುವುದಿಲ್ಲ. |
| ಆ | ಬಂದಿದ್ದಲ್ಲಿ, ಎಷ್ಟು ಅನಧಿಕೃತ ಜಾಹಿರಾತು ಫಲಕಗಳನ್ನು ಅಳವಡಿಸಲಾಗಿದೆ; ಈ ಬಗ್ಗೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| ಇ | ಅನಧಿಕೃತ ಜಾಹಿರಾತು ಫಲಕಗಳಿಂದ ಸರ್ಕಾರಕ್ಕೆ ಬರುವ ತೆರಿಗೆ ಆದಾಯವೆಷ್ಟು; | ಅನ್ವಯಿಸುವುದಿಲ್ಲ. |
| ಈ | ಹಾಗಿದ್ದಲ್ಲಿ, ಅನಧಿಕೃತ ಜಾಹಿರಾತು ಫಲಕಗಳನ್ನು ತೆರವುಗೊಳಿಸುವ ಮತ್ತು ಅಂತಹವರ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಸರ್ಕಾರದ ನಿಲುವೇನು; | ಅನ್ವಯಿಸುವುದಿಲ್ಲ. |
| ಉ | ಜಾಹಿರಾತು ಫಲಕಗಳನ್ನು ಅಳವಡಿಸಲು ಸರ್ಕಾರ ಅನುಮತಿ ನೀಡಿದೆಯೇ; ನೀಡಿದ್ದಲ್ಲಿ ಯಾವ್ಯಾವ ಸಂಸ್ಥೆಗಳಿಗೆ ಅನುಮತಿ ನೀಡಲಾಗಿದೆ; | ಜಾಹಿರಾತು ಫಲಕಗಳನ್ನು ಅಳವಡಿಸಲು ಅಣ್ಣೇಶ್ವರ ಗ್ರಾಮ ಪಂಚಾಯತಿಯು ಸಂಸ್ಥೆಗಳಿಗೆ ಅನುಮತಿ ನೀಡಿರುವ ವಿವರವನ್ನು ಅನುಬಂಧ-1 ರಲ್ಲಿ ನೀಡಿದೆ. |
| ಊ | ಜಾಹಿರಾತು ಫಲಕಗಳನ್ನು ಅಳವಡಿಸಲು ಅನುಮತಿ ನೀಡುವಾಗ ಸರ್ಕಾರವು ಅನುಸರಿಸುವ ಮಾನದಂಡಗಳೇನು? | ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 561 ಗ್ರಾಪಂಅ 2012 ದಿನಾಂಕ:16-02-2013 ರಲ್ಲಿ ಕರ್ನಾಟಕ ಪಂಚಾಯತ್ ರಾಜ್ (ಜಾಹಿರಾತು ಮತ್ತು ಫಲಕಗಳ ಅಳವಡಿಕೆಯ ಮೇಲೆ ಗ್ರಾಮ ಪಂಚಾಯಿತಿಗಳ ನಿಯಂತ್ರಣ) (ಮಾದರಿ) ಉಪವಿಧಿಗಳು 2013 ಅನ್ನು ರೂಪಿಸಲಾಗಿದ್ದು, ಅದರಂತೆ ಉಪವಿಧಿ 5 ರಲ್ಲಿ ಗ್ರಾಮ ಪಂಚಾಯತಿಗಳು ಜಾಹೀರಾತು / ಜಾಹೀರಾತು ಫಲಕಗಳನ್ನು ಅಳವಡಿಸಲು ಅನುಮತಿ ನೀಡಲು ಕೆಳಕಂಡ ನಿಬಂಧನೆಗಳನ್ನು ವಿಧಿಸಲಾಗಿದೆ.<br>1. ಕಂದಾಯ ಇಲಾಖೆಯ ಸಕ್ಷಮ ಪ್ರಾಧಿಕಾರದಿಂದ ಈ ಉದ್ದೇಶಕ್ಕಾಗಿ ಭೂ ಪರಿವರ್ತನೆಯಾಗದ ಖಾಸಗಿ ಭೂಮಿಯಲ್ಲಿ ಜಾಹಿರಾತುಗಳ ಪ್ರದರ್ಶನಕ್ಕೆ ಅನುಮತಿ ಕೋರಿ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸುವುದು.<br>2. ಸಾರ್ವಜನಿಕ ಉದ್ಯಾನವನ ಅಥವಾ ಪೂಜಾ ಸ್ಥಳಗಳಿಂದ 90 ಅಡಿಯೊಳಗೆ ಇರತಕ್ಕದಲ್ಲ.<br>3. ಜಾಹಿರಾತು ಫಲಕವು ಒಂದು ವೇಳೆ ಪ್ರಕಾಶಿತವಿದ್ದಲ್ಲಿ ಎಸ್ಕಾಂನಿಂದ ಸ್ಥಾಪನೆಯ ಯಾವುದೇ ವಿದ್ಯುತ್ ಅಪಘಾತಕ್ಕೆ ಒಳಗಾಗುವುದಿಲ್ಲವೆಂದು ಪಡೆದ ಪ್ರಮಾಣ ಪತ್ರವನ್ನು ಪಡೆಯುವುದು.<br>4. ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು, ಲೋಕೋಪಯೋಗಿ ಇಲಾಖೆ ಏರ್‌ಪೋರ್ಟ್ ಅಥಾರಿಟಿ ಆಫ್ ಇಂಡಿಯಾ ಮತ್ತು ಇತರೆ ಅನ್ವಯಿಸುವ ಶಾಸನಬದ್ಧ ಪ್ರಾಧಿಕಾರಗಳ ವ್ಯಾಪ್ತಿಯಲ್ಲಿನ ಪ್ರದೇಶಗಳಲ್ಲಿ ಸಂಬಂಧಿಸಿದ ಪ್ರಾಧಿಕಾರಗಳಿಂದ ನಿರಾಕ್ಷೇಪಣಾ ಪತ್ರ ಪಡೆಯುವ ನಿಬಂಧನೆಗಳಿಗೆ ಒಳಪಟ್ಟು ಎತ್ತರದ ನಿರ್ಬಂಧಗಳ ಸಂಬಂಧಪಟ್ಟ ಪ್ರಾಧಿಕಾರಗಳು ನಿಗದಿಪಡಿಸಿರುವ ಮಿತಿಗೆ ಒಳಪಡುತ್ತವೆ. ಇತರೆ ಎಲ್ಲಾ ಪ್ರದೇಶಗಳಲ್ಲಿ ಇದು ಭೂ ಮಟ್ಟದಿಂದ 40 ಅಡಿಗಳಿಂತ ಹೆಚ್ಚು ಇರತಕ್ಕದ್ದಲ್ಲ. |

ಸಂ. ಗ್ರಾಅಪ 268 ಗ್ರಾಪಂಅ 2020

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 9 ಎಲ್‌ಎಕ್ಯೂ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 18-03-20

87
18/3/20

ಇಂದ:

ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಕುಮಾರ ಸ್ವಾಮಿ. ಹೆಚ್.ಕೆ ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1133 ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಕುಮಾರ ಸ್ವಾಮಿ. ಹೆಚ್.ಕೆ. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ:1133 ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,
V. Gut
ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿಗಳು(ಎಂಎಂಐ-2), ಜಲಸಂಪನ್ಮೂಲ ಇಲಾಖೆ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1133
2. ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ.
3. ಉತ್ತರಿಸಬೇಕಾದ ದಿನಾಂಕ : 10-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಭೂಸ್ವಾಧೀನಾಧಿಕಾರಿಗಳ ಕಛೇರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಿಂದ ನೀರಾವರಿ ಇಲಾಖೆಯಲ್ಲಿ ಯೋಜನಾವಾರು ಎಷ್ಟು ಜಮೀನುಗಳನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದೆ; ಜಮೀನಿನ ವಿಸ್ತೀರ್ಣ ಮತ್ತು ಪ್ರಕರಣಗಳೆಷ್ಟು ; (ಸಂಪೂರ್ಣ ಮಾಹಿತಿ ನೀಡುವುದು). | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಭೂಸ್ವಾಧೀನಾಧಿಕಾರಿಗಳ ಕಛೇರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಿಂದ ನೀರಾವರಿ ಇಲಾಖೆಯಲ್ಲಿ ಭೂಸ್ವಾಧೀನಪಡಿಸಿಕೊಂಡ ಜಮೀನಿನ ವಿವರ ಕೆಳಕಂಡಂತಿದೆ: |

| ಕ್ರ ಸಂ | ಯೋಜನೆ | ಭೂಸ್ವಾಧೀನ ಪಡಿಸಿಕೊಂಡ ಪ್ರಕರಣಗಳ ಸಂಖ್ಯೆ | ಭೂಸ್ವಾಧೀನ ಪಡಿಸಿಕೊಂಡ ಜಮೀನಿನ ವಿಸ್ತೀರ್ಣ |
|---|---|---|---|
| 1 | ಯಗಚಿ | 5 | 71.17 ಎಕರೆ (ಜಮೀನು)<br>1499.00 ಚ.ಮೀ (ನಿವೇಶನ) |
| 2 | ರೈಲ್ವೆ | 1 | 1634.00 ಚ.ಮೀ (ನಿವೇಶನ) |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಆ | ಈ ಸಂಬಂಧ ಎಷ್ಟು ಪ್ರಕರಣಗಳಲ್ಲಿ 4(1) ಮತ್ತು 6(1) ನೋಟಿಫಿಕೇಷನ್ ಹಾಗೂ ಅಂತಿಮ ಐತೀರ್ಪು ಪ್ರಕಟಣೆಗಳನ್ನು ಹೊರಡಿಸಲಾಗಿರುತ್ತದೆ; (ಕಛೇರಿವಾರು ಸಂಪೂರ್ಣ ಮಾಹಿತಿ ನೀಡುವುದು). | ಹೊಸ ಭೂಸ್ವಾಧೀನ ಕಾಯ್ದೆ 2013 ರನ್ವಯ 11(1), 19(1) ಮತ್ತು ಅಂತಿಮ ಐತೀರ್ಪು ಪ್ರಕಟಗೊಂಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ : |

| ಕ್ರ ಸಂ | ಯೋಜನೆ | 11(1), 19(1) ಮತ್ತು ಅಂತಿಮ ಐತೀರ್ಪು ಪ್ರಕಟಗೊಂಡಿರುವ ಪ್ರಕರಣಗಳ ಸಂಖ್ಯೆ |
|---|---|---|
| 1 | ಯಗಚಿ | 5 |
| 2 | ರೈಲ್ವೆ | 1 |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಇ | ಭೂಸ್ವಾಧೀನಾಧಿಕಾರಿಗಳು ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳು ಹೊರಡಿಸಿರುವ ಐತೀರ್ಪಿನ ಎಷ್ಟು ಪ್ರಕರಣಗಳ ವಿರುದ್ಧ ಸಿವಿಲ್ ನ್ಯಾಯಾಲಯದಲ್ಲಿ ದಾವೆಗಳನ್ನು ಹೂಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು). | ಭೂಸ್ವಾಧೀನಾಧಿಕಾರಿಗಳು ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳು ಹೊರಡಿಸಿರುವ ಐತೀರ್ಪಿನ ವಿರುದ್ಧ ಕಲಂ 64 ರಂತೆ ಸ್ವೀಕೃತವಾದ ಅರ್ಜಿಗಳನ್ನು ನ್ಯಾಯಾಲಯಕ್ಕೆ ರೆಫರೆನ್ಸ್ ಮಾಡಲಾಗಿ ದಾಖಲಾಗಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ : |

| ಕ್ರ ಸಂ | ಯೋಜನೆ | ಕಲಂ 64 ರಂತೆ ಸ್ವೀಕೃತವಾದ ಅರ್ಜಿಗಳನ್ನು ನ್ಯಾಯಾಲಯಕ್ಕೆ ರೆಫರೆನ್ಸ್ ಮಾಡಲಾಗಿ ದಾಖಲಾಗಿರುವ ಪ್ರಕರಣಗಳ ಸಂಖ್ಯೆ |
|---|---|---|
| 1 | ಯಗಚಿ | 64 |
| 2 | ರೈಲ್ವೆ | 1 |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಈ | ಎಷ್ಟು ಪ್ರಕರಣಗಳಲ್ಲಿ ಭೂಸ್ವಾಧೀನಾಧಿಕಾರಿಗಳು ನಿಗಧಿಪಡಿಸಿದ ಅವಾರ್ಡ್ ಮೊತ್ತಕ್ಕಿಂತ ಹೆಚ್ಚಿನ ಪರಿಹಾರವನ್ನು ನಿಗಧಿಪಡಿಸಿ ಸಿವಿಲ್ ನ್ಯಾಯಾಲಯದಲ್ಲಿ ಆದೇಶವಾಗಿದೆ ಮತ್ತು ಎಷ್ಟು ಪ್ರಕರಣಗಳಲ್ಲಿ ಭೂಸ್ವಾಧೀನಾಧಿಕಾರಿಗಳು ಸಿವಿಲ್ ನ್ಯಾಯಾಲಯದ ಆದೇಶದ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯಗಳಲ್ಲಿ ಮೇಲ್ಮನವಿಗಳನ್ನು ಸಲ್ಲಿಸಲಾಗಿರುತ್ತದೆ; | ಹೊಸ ಭೂಸ್ವಾಧೀನ ಕಾಯ್ದೆ 2013 ರ ಕಲಂ 64 ರಂತೆ ನ್ಯಾಯಾಲಯಕ್ಕೆ ರೆಫರೆನ್ಸ್ ಮಾಡಲಾದ ಎಲ್‌ಎಸಿ ಪ್ರಕರಣಗಳಲ್ಲಿ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣಗಳು ಆದೇಶವಾಗಿರುವುದಿಲ್ಲ, ಆದ್ದರಿಂದ ಮೇಲ್ಮನವಿ ಸಲ್ಲಿಸಿರುವುದಿಲ್ಲ. |
| ಉ | ಮೇಲ್ಮನವಿಗಳನ್ನು ಸಲ್ಲಿಸದಿದ್ದಲ್ಲಿ ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | |
| ಊ | ಕೆಲವೊಂದು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ವಿಚಾರಣಾ ಸಮಯದಲ್ಲಿ ಸರ್ಕಾರಿ ವಕೀಲರು ತಮ್ಮ ಕರ್ತವ್ಯವನ್ನು ಕಾನೂನು ರೀತಿಯಲ್ಲಿ ನಿರ್ವಹಿಸದೇ ಅರ್ಜಿದಾರರೊಂದಿಗೆ ಶಾಮೀಲಾಗಿ ಸಿವಿಲ್ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಋ | ಇಂತಹ ಪ್ರಕರಣಗಳಲ್ಲಿ ಹಾಸನ ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರಿ ವಕೀಲರುಗಳು ತಮ್ಮ ಕಾರ್ಯವನ್ನು ಸರಿಯಾಗಿ ನಿರ್ವಹಿಸದೇ ಸರ್ಕಾರದ ಬೊಕ್ಕಸಕ್ಕೆ ಅಪಾರ ಹಾನಿ ಮಾಡಿರುವುದಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | |

*ಸಂಖ್ಯೆ:ಜಸಂಇ 09 ಎನ್‌ಎಲ್‌ಎ 2020*

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 7 ಎಸ್‌ಎಲ್‌ಎ 20

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 18-03-20

ಇಂದ:
ಸರ್ಕಾರದ ಕಾರ್ಯದರ್ಶಿಗಳು,
ಜಲ ಸಂಪನ್ಮೂಲ ಇಲಾಖೆ,
ಬೆಂಗಳೂರು.

89
10/3/20

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ / ~~ಪರಿಷತ್ತು~~,
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಕರ್ನಾಟಕ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಲಿಂಗೇಶ್. ಕೆ. ಎಸ್. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1128ಕ್ಕೆ ಉತ್ತರಗಳನ್ನು ಸಲ್ಲಿಸುವ ಬಗ್ಗೆ.

** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ / ~~ಪರಿಷತ್~~ ಸದಸ್ಯರಾದ ಶ್ರೀ. ಲಿಂಗೇಶ್. ಕೆ. ಎಸ್. ರವರ ಚುಕ್ಕೆ ~~ಗುರುತಿನ~~ / ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1128ಕ್ಕೆ ಜಲಸಂಪನ್ಮೂಲ ಇಲಾಖೆಯು ನೀಡಿರುವ ಉತ್ತರದ 100 ಪ್ರತಿಗಳನ್ನು, ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,
V. Guth
ಶಾಖಾಧಿಕಾರಿ
ಜಲಸಂಪನ್ಮೂಲ ಇಲಾಖೆ (ಎಂಎಂಐ-2)

ಪ್ರತಿಯನ್ನು, ಮಾಹಿತಿಗಾಗಿ:
1. ಮಾನ್ಯ ಜಲಸಂಪನ್ಮೂಲ ಸಚಿವರ ಆಪ್ತ ಕಾರ್ಯದರ್ಶಿಗಳು.
2. ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ.
3. ಸರ್ಕಾರದ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಜಲಸಂಪನ್ಮೂಲ ಇಲಾಖೆ.
4. ಸರ್ಕಾರದ ಅಧೀನ ಕಾರ್ಯದರ್ಶಿಗಳು-[illegible] ಜಲಸಂಪನ್ಮೂಲ ಇಲಾಖೆ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1128
2. ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್.
3. ಉತ್ತರಿಸಬೇಕಾದ ದಿನಾಂಕ : 10-03-2020
4. ಉತ್ತರಿಸುವ ಸಚಿವರು : ಮಾನ್ಯ ಜಲಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಹಾಸನ ಜಿಲ್ಲೆಯಲ್ಲಿ ಭೂಸ್ವಾಧೀನಾಧಿಕಾರಿಗಳ ಕಛೇರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಿಂದ ಕಳೆದ ಮೂರು ವರ್ಷಗಳಲ್ಲಿ ನೀರಾವರಿ ಇಲಾಖೆಯಲ್ಲಿ ಯೋಜನೆವಾರು ಜಮೀನುಗಳನ್ನು ಭೂಸ್ವಾಧೀನ ಪಡಿಸಿಕೊಂಡ ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ಹೆಚ್ಚಿನ ಪರಿಹಾರ ಕೋರಿ ದಾವೆ ಹೂಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | <table><tr><th>ಕ್ರ ಸಂ</th><th>ಯೋಜನೆ</th><th>ಕಲಂ 64 ರಂತೆ ಸ್ವೀಕೃತವಾದ ಅರ್ಜಿಗಳನ್ನು ನ್ಯಾಯಾಲಯಕ್ಕೆ ರೆಫರೆನ್ಸ್ ಮಾಡಲಾಗಿ ದಾಖಲಾಗಿರುವ ಪ್ರಕರಣಗಳ ಸಂಖ್ಯೆ</th></tr><tr><td>1</td><td>ಯಗಚಿ</td><td>64</td></tr><tr><td>2</td><td>ರೈಲ್ವೆ</td><td>1</td></tr></table> |
| ಆ | ಈ ಪ್ರಕರಣಗಳ ಪೈಕಿ ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯಗಳು ಭೂಸ್ವಾಧೀನಾಧಿಕಾರಿ ನಿಗಧಿಪಡಿಸಿದ ಪರಿಹಾರಕ್ಕಿಂತ 10 ರಿಂದ 100 ಪಟ್ಟಿಗೂ ಹೆಚ್ಚಿನ ಪರಿಹಾರವನ್ನು ನಿಗಧಿಗೊಳಿಸಿ ಆದೇಶ ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ | ಇಂತಹ ಎಷ್ಟು ಪ್ರಕರಣಗಳಲ್ಲಿ ಭೂಸ್ವಾಧೀನಾಧಿಕಾರಿಗಳು ಸಿವಿಲ್ ನ್ಯಾಯಾಲಯವು ನಿಗಧಿಪಡಿಸಿರುವ ಪರಿಹಾರ ನ್ಯಾಯ ಸಮ್ಮತವಲ್ಲವೆಂದು ಅಭಿಪ್ರಾಯಪಟ್ಟು ಮಾನ್ಯ ಉಚ್ಚ ನ್ಯಾಯಾಲಯಗಳಲ್ಲಿ ಮೇಲ್ಮನವಿ ಸಲ್ಲಿಸಲು ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆಯೇ; | ಹೊಸ ಭೂಸ್ವಾಧೀನ ಕಾಯ್ದೆ 2013 ರ ಕಲಂ 64 ರಂತೆ ನ್ಯಾಯಾಲಯಕ್ಕೆ ರೆಫರೆನ್ಸ್ ಮಾಡಲಾದ ಎಲ್‌ಎಸಿ ಪ್ರಕರಣಗಳಲ್ಲಿ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣಗಳು ಆದೇಶವಾಗಿರುವುದಿಲ್ಲ. ಆದ್ದರಿಂದ ಕಾನೂನು ಅಭಿಪ್ರಾಯ ಪಡೆದಿರುವುದಿಲ್ಲ ಹಾಗೂ ಮೇಲ್ಮನವಿ ಸಲ್ಲಿಸಿರುವುದಿಲ್ಲ. |
| ಈ | ಇಂತಹ ಎಷ್ಟು ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗಳನ್ನು ಸಲ್ಲಿಸಲಾಗಿದೆ ಮತ್ತು ಎಷ್ಟು ಪ್ರಕರಣಗಳಲ್ಲಿ ಮೇಲ್ಮನವಿಗಳನ್ನು ಸಲ್ಲಿಸುವುದು ಸೂಕ್ತವಲ್ಲವೆಂದು ಅಭಿಪ್ರಾಯ ನೀಡಲಾಗಿದೆ (ಸಂಪೂರ್ಣ ಮಾಹಿತಿ ನೀಡುವುದು) | |
| ಉ | ಒಂದು ವೇಳೆ ಮೇಲ್ಮನವಿಗಳನ್ನು ಸಲ್ಲಿಸದಿದ್ದಲ್ಲಿ, ಎಷ್ಟು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದ ಆದೇಶದಂತೆ ಪರಿಹಾರ ನೀಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಊ | ಕೆಲವೊಂದು ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯದಲ್ಲಿ ವಿಚಾರಣಾ ಸಮಯದಲ್ಲಿ ಸರ್ಕಾರಿ ವಕೀಲರು ತಮ್ಮ ಕರ್ತವ್ಯವನ್ನು ಕಾನೂನು ರೀತಿಯಲ್ಲಿ ನಿರ್ವಹಿಸದೇ ಅರ್ಜಿದಾರರೊಂದಿಗೆ ಶಾಮೀಲಾಗಿ ಸಿವಿಲ್ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೇಲಿನ ಉತ್ತರದಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ. |
| ಋ | ಇಂತಹ ಪ್ರಕರಣಗಳಲ್ಲಿ ಹಾಸನ ಜಿಲ್ಲಾಧಿಕಾರಿಗಳು ಹಾಗೂ ಸರ್ಕಾರಿ ವಕೀಲರುಗಳು ತಮ್ಮ ಕಾರ್ಯವನ್ನು ಸರಿಯಾಗಿ ನಿರ್ವಹಿಸದೇ ಸರ್ಕಾರದ ಬೊಕ್ಕಸಕ್ಕೆ ಅಪಾರ ಹಾನಿ ಮಾಡಿರುವುದಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | |

***ಸಂಖ್ಯೆ:ಜಸಂಇ 07 ಎನ್‌ಎಲ್‌ಎ 2020***

(ರಮೇಶ್ ಲ. ಜಾರಕಿಹೊಳಿ)
ಜಲಸಂಪನ್ಮೂಲ ಸಚಿವರು

| | | | | | | | | | |
|---|---|---|---|---|---|---|---|---|---|
| 8 | ಅಲೆವೂರು ಗ್ರಾಮ ಪಂಚಾಯತ್ ಪ್ರಗತಿ ನಗರ ಪುತ್ತು ನಾಯ್ಕ ಮನೆ ಬಳಿಯ ರಸ್ತೆ ಕಾಂಕ್ರೀಟೀಕರಣ. | ಕಾಪು | 4.00 | 4.00 | | | | | |
| 9 | ಆಲೆವೂರು ಗ್ರಾಮ ಪಂಚಾಯತ್ ಮಾರ್ಪಳ್ಳಿ ಪಂ.ಪಂಗಡ ಕಾಲೋನಿ ರಸ್ತೆ ಕಾಂಕ್ರೀಟೀಕರಣ. | ಕಾಪು | 1.00 | 1.00 | | | | | ಕಾಮಗಾರಿ ಮುಕ್ತಾಯಗೊಂಡಿದೆ |
| 10 | ಹೆಜಮಾಡಿ ಗ್ರಾಮ ಪಂಚಾಯತ್ ವ್ಯಾಪ್ತಿಯ ಗುಡ್ಡೆಯಂಗಡಿ ಬಟ್ಟಾರದಿಂದ ಚಂದ್ರ ಮುಖಾರಿ ಮನೆಯವರೆಗಿನ ರಸ್ತೆ ಅಭಿವೃದ್ಧಿ ಬದಲಿ ಪಡುರು ಗ್ರಾಮ ಪಂಚಾಯತ್ ಜಯಂತ್ ನಾಯ್ಕ ಮನೆಯಿಂದ ಕೇಶವ ನಾಯ್ಕ ಮನೆಯವರೆಗಿನ ರಸ್ತೆ ಅಭಿವೃದ್ಧಿ ಕಾಮಗಾರಿ | ಕಾಪು | 5.00 | 5.00 | | | | | ಕಾಮಗಾರಿ ಮುಕ್ತಾಯಗೊಂಡಿದೆ |
| 11 | ಎಲ್ಲೂರು ಗ್ರಾಮ ಪಂಚಾಯತ್ ವ್ಯಾಪ್ತಿಯ ಗುತ್ತಿಬೆಟ್ಟು ಕೊರಗರ ಕಾಲೋನಿ ರಸ್ತೆ ಅಭಿವೃದ್ಧಿ | ಕಾಪು | 5.00 | 5.00 | | | | | ಕಾಮಗಾರಿ ಮುಕ್ತಾಯಗೊಂಡಿದೆ |
| 12 | ಬೊಮ್ಮರಬೆಟ್ಟು ಗ್ರಾಮ ಪಂಚಾಯತ್ ವ್ಯಾಪ್ತಿಯ ಹಿರಿಯಡ್ಕ 3ನೇ ವಾರ್ಡ್ ಪದ್ಮನಾಭ ಆಚಾರ್ಯ ಮನೆಯಿಂದ ರಾಘವೇಂದ್ರ ನಾಯ್ಕ ಮನೆ ಬಳಿವರೆಗೆ ರಸ್ತೆ ಅಭಿವೃದ್ಧಿ. | ಕಾಪು | 5.00 | 5.00 | | | | | ಕಾಮಗಾರಿ ಮುಕ್ತಾಯಗೊಂಡಿದೆ |
| | ಒಟ್ಟು | | 75.00 | 75.00 | 0.00 | 0.00 | 0.00 | 75.00 | ಕಾಮಗಾರಿ ಮುಕ್ತಾಯಗೊಂಡಿದೆ |
| | 2019-20 ನೇ ಸಾಲಿನಲ್ಲಿ ಕೈಗೊಂಡ ಕೆ.ಆರ್.ಐ.ಡಿ.ಎಲ್ ಟಿ.ಎಸ್.ಪಿ ಕಾಮಗಾರಿಗಳು | | | | | | | | |
| 1 | ಮಣಿಪುರ ಗ್ರಾ.ಪಂ ತೋಕೋಳಿಯಿಂದ ಮುಕುಡವರೆಗಿನ ರಸ್ತೆ ಅಭಿವೃದ್ಧಿ | ಕಾಪು | 25.00 | 25.00 | 0.00 | 0.00 | 0.00 | 0.00 | |
| 2 | ಬೆಳ್ಳೆ ಗ್ರಾ.ಪಂ ಕಾಡಬೆಟ್ಟು ಲಯನ್ಸ್ ಕ್ಲಬ್ ಮೂಡುಬೆಳ್ಳೆ ರಸ್ತೆ ಅಭಿವೃದ್ಧಿ. | ಕಾಪು | 25.00 | 25.00 | | | | | ಕಾಮಗಾರಿ ಪ್ರಗತಿಯಲ್ಲಿದೆ |
| 3 | ಬೆಳ್ಳೆ ಗ್ರಾ.ಪಂ ನಿಟ್ಟುಬೆ ಶಾಂತಿಗುರಿ ರಸ್ತೆ ಅಭಿವೃದ್ಧಿ. | ಕಾಪು | 25.00 | 25.00 | | | | | ಕಾಮಗಾರಿ ಪ್ರಗತಿಯಲ್ಲಿದೆ |
| 4 | ಮುದರಂಗಡಿ ಗ್ರಾ.ಪಂ ಪೆರ್ನಾಲ್ ಕೊರಗರ ಆಶ್ರಯ ರಸ್ತೆ ಅಭಿವೃದ್ಧಿ. | ಕಾಪು | 15.00 | 15.00 | | | | | ಕಾಮಗಾರಿ ಪ್ರಗತಿಯಲ್ಲಿದೆ |
| 5 | ಎಲ್ಲೂರು ಗ್ರಾ.ಪಂ ಗುತ್ತಿಬೆಟ್ಟು ಪ.ಪಂಗಡ ರಸ್ತೆ ಅಭಿವೃದ್ಧಿ. | ಕಾಪು | 10.00 | 10.00 | | | | | ಕಾಮಗಾರಿ ಪ್ರಗತಿಯಲ್ಲಿದೆ |
| | ಒಟ್ಟು | | 100.00 | 100.00 | 0.00 | 0.00 | 0.00 | 0.00 | ಕಾಮಗಾರಿ ಪ್ರಗತಿಯಲ್ಲಿದೆ |
| | Grand Total-KRIDL-TSP | | 475.00 | 460.00 | 200.00 | 90.00 | 0.00 | 75.00 | |

# ಕರ್ನಾಟಕ ಸರ್ಕಾರ

ಸಂಖ್ಯೆ:ಆಇ 02 ಇಎಲ್‌ಕ್ಯೂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:06.03.2020

44
415
10/03/2020

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ,
ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 661ಕ್ಕೆ ಉತ್ತರ ಕಳುಹಿಸುವ ಕುರಿತು.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:661ಕ್ಕೆ ಉತ್ತರವನ್ನು ತಯಾರಿಸಿ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

6.3.20

(ಅಜಯ್ ಎಸ್. ಕೊರಡೆ)
ಶಾಖಾಧಿಕಾರಿ,
ಆರ್ಥಿಕ ಇಲಾಖೆ (ಅಬಕಾರಿ).

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 661 |
| ಮಾನ್ಯ ವಿಧಾನಸಭೆ ಸದ್ಯಸರು: | ಶ್ರೀ ಬಸವನಗೌಡ ದದ್ದಲ (ರಾಯಚೂರು ಗ್ರಾಮಾಂತರ) |
| ಉತ್ತರಿಸಬೇಕಾದವರು: | ಅಬಕಾರಿ ಸಚಿವರು |
| ಉತ್ತರಿಸಬೇಕಾದ ದಿನಾಂಕ: | 10-03-2020 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ತಾಲ್ಲೂಕಿನಲ್ಲಿ ಪರವಾನಗಿ ಪಡೆದಿರುವ ಬಾರ್ ಗಳ ಸಂಖ್ಯೆ ಎಷ್ಟು (ವಿವರ ನೀಡುವುದು); | 2019-20ನೇ ಸಾಲಿಗೆ ರಾಯಚೂರು ತಾಲ್ಲೂಕಿನಲ್ಲಿ ಒಟ್ಟು 70 ವಿವಿಧ ಬಗೆಯ ಸನ್ನದುಗಳಿಗೆ ಪರವಾನಿಗೆ ನೀಡಲಾಗಿರುತ್ತದೆ. ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಸದರಿ ತಾಲ್ಲೂಕಿನಲ್ಲಿ ಸ್ಥಳೀಯ ಅಂಗಡಿಗಳಲ್ಲಿ ಮದ್ಯ ಮಾರಾಟ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಯಚೂರು ತಾಲ್ಲೂಕಿನಲ್ಲಿ ಕೆಲವು ವ್ಯಕ್ತಿಗಳು ಕಾನೂನು ಬಾಹಿರವಾಗಿ ಸ್ಥಳೀಯ ಅಂಗಡಿಗಳಲ್ಲಿ ಮದ್ಯ ಮಾರಾಟ ಮಾಡುತ್ತಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ. |
| ಇ) | ಬಂದಿದ್ದಲ್ಲಿ, ಇದನ್ನು ತಡೆಗಟ್ಟುವಲ್ಲಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ (ಮಾಹಿತಿ ನೀಡುವುದು); | ಅಕ್ರಮವಾಗಿ ಮದ್ಯ ಮಾರಾಟ ಮಾಡುವವರ ವಿರುದ್ಧ ಅಬಕಾರಿ ಕಾಯ್ದೆಯ ಅಡಿಯಲ್ಲಿ ಪ್ರಕರಣಗಳನ್ನು ದಾಖಲಿಸಲಾಗುತ್ತಿದ್ದು ರಾಯಚೂರು ಜಿಲ್ಲೆಯಲ್ಲಿ 2019-20ನೇ ಅಬಕಾರಿ ಸಾಲಿನಲ್ಲಿ ಜನವರಿ ಅಂತ್ಯದ ವರೆಗೆ ಒಟ್ಟು 213 ಪ್ರಕರಣಗಳನ್ನು ದಾಖಲಿಸಲಾಗಿದೆ.<br><br>ಅಲ್ಲದೇ, ಇಂತಹ ಪ್ರಕರಣಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಅಬಕಾರಿ ಕಾಯ್ದೆ ಮತ್ತು ತತ್ಸಂಬಂಧ ನಿಯಮಗಳ ಜಾರಿಗೊಳಿಸುವಿಕೆ ಕ್ರಮಗಳನ್ನು ಚುರುಕುಗೊಳಿಸಲಾಗಿದೆ. ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ 2 ತಿಂಗಳಿಗೊಮ್ಮೆ ನಡೆಯುವ ಸಮನ್ವಯ ಸಮಿತಿ ಸಭೆಯಲ್ಲೂ ಅಬಕಾರಿ ಅಕ್ರಮಗಳ ತಡೆಗಟ್ಟುವ ಕುರಿತು ಅಗತ್ಯ ನಿರ್ದೇಶನಗಳನ್ನು ನೀಡಲಾಗುತ್ತಿದೆ. ಅಬಕಾರಿ ಇಲಾಖೆಯ ಸಿಬ್ಬಂದಿಯು ಸದಾ ಕಾಲ ಜಾಗೃತರಾಗಿದ್ದು ನಿರಂತರ ದಾಳಿ ಕಾರ್ಯ ನಡೆಸಿ, ಅಕ್ರಮ ಮದ್ಯ ಮಾರಾಟವಾಗದಂತೆ ಎಚ್ಚರಿಕೆ ವಹಿಸುವಂತೆ ನಿರ್ದೇಶಿಸಲಾಗಿದೆ. |

…2.

| | | |
|---|---|---|
| ಈ) | ಆಂಧ್ರ ಪ್ರದೇಶ ಮತ್ತು ತೆಲಂಗಾಣ ರಾಜ್ಯದ ಗಡಿ ಗ್ರಾಮಗಳಲ್ಲಿ ಕಲಬೆರಕೆ ಸಾರಾಯಿ ತಯಾರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗೂ ಇದನ್ನು ತಡೆಗಟ್ಟುವ ಬಗ್ಗೆ ಸರ್ಕಾರ ಯಾವ ಕ್ರಮ ಕೈಗೊಂಡಿರುತ್ತದೆ (ಮಾಹಿತಿ ಒದಗಿಸುವುದು)? | ಆಂಧ್ರ ಪ್ರದೇಶ ಮತ್ತು ತೆಲಂಗಾಣ ರಾಜ್ಯದ ಗಡಿ ಗ್ರಾಮಗಳಿಂದ ರಾಯಚೂರು ತಾಲ್ಲೂಕಿಗೆ ಕಲಬೆರಕೆ ಸಾರಾಯಿ (ಸೇಂದಿ) ತಯಾರಿಸಿ ಸಾಗಾಣಿಕೆ/ಮಾರಾಟ ಮಾಡುತ್ತಿರುವುದು ಇಲಾಖೆಯ ಗಮನಕ್ಕೆ ಬಂದಿರುತ್ತದೆ.<br><br>ಸದರಿ ಅಕ್ರಮವನ್ನು ತಡೆಗಟ್ಟಲು ವಿಶೇಷ ತಂಡವನ್ನು ರಚಿಸಿ ಅಬಕಾರಿ ನಿರೀಕ್ಷಕ ದರ್ಜೆಯ ಅಧಿಕಾರಿಯನ್ನು ಮುಖ್ಯಸ್ಥರನ್ನಾಗಿಸಿ ಕಲಬೆರಕೆ ಸಾರಾಯಿ(ಸೇಂದಿ)ಯನ್ನು ತಡೆಗಟ್ಟಲು ನಿರಂತರ ಅಬಕಾರಿ ದಾಳಿ, ಸಾಮೂಹಿಕ ದಾಳಿಗಳನ್ನು ಮಾಡುವುದು, ರಸ್ತೆ ಗಸ್ತು ಮತ್ತು ರಸ್ತೆಗಾವಲು ಮುಂತಾದ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ. ರೈಲ್ವೆ ಪೋಲಿಸರು ಹಾಗೂ ಸ್ಥಳೀಯ ಪೋಲಿಸರೊಂದಿಗೆ ಜಂಟಿ ಕಾರ್ಯಚರಣೆಯನ್ನು ಕೂಡ ಮಾಡಲಾಗುತ್ತಿದೆ. ಜೊತೆಗೆ ಆಂಧ್ರ ಪ್ರದೇಶ ಮತ್ತು ತೆಲಂಗಾಣದ ಅಬಕಾರಿ ಇಲಾಖೆ ಅಧಿಕಾರಿಗಳೊಂದಿಗೆ ಸಮನ್ವಯ ಸಾಧಿಸಿ, ಕಲಬೆರಕೆ ಸಾರಾಯಿ (ಸೇಂದಿ) ಸಾಗಾಣಿಕೆ/ಮಾರಾಟ ಸಂಬಂಧ 2019–20ನೇ ಸಾಲಿನಲ್ಲಿ 78 ಪ್ರಕರಣಗಳನ್ನು ದಾಖಲಿಸಿ, 79 ಆರೋಪಿಗಳನ್ನು ದಸ್ತಗಿರಿಗೊಳಿಸಲಾಗಿರುತ್ತದೆ. |

(ಎಚ್. ನಾಗೇಶ್)
ಅಬಕಾರಿ ಸಚಿವರು

ಆಇ 02 ಇಎಲ್ ಕ್ಯೂ 2020

ವಿಧಾನ ಸಭೆಯ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:661ರ ಉತ್ತರದ ಅನುಬಂಧ

2019–20ನೇ ಸಾಲಿಗೆ ರಾಯಚೂರು ತಾಲೂಕಿನಲ್ಲಿ ವಿವಿಧ ಬಗೆಯ ಸನ್ನದುಗಳಿಗೆ ಪರವಾನಿಗೆ ನೀಡಿರುವ ವಿವರಗಳು

| ಕ್ರ.ಸಂ | ಸನ್ನದುದಾರರ ಹೆಸರು | ಸನ್ನದು ವಿಧ |
|---|---|---|
| 1 | ಈ ಸಾಧನಮ್ಮ, ಮಟಮಾರಿ ಗ್ರಾಮ ರಾಯಚೂರು | ಸಿಎಲ್–2 |
| 2 | ವಿ. ರಾಘವೇಂದ್ರ, ಗದ್ವಾಲ್ ರಸ್ತೆ ರಾಯಚೂರು | ಸಿಎಲ್–2 |
| 3 | ಎಂ. ನರಸಣ್ಣಗೌಡ, ದೇವಸೂಗೂರು ಗ್ರಾಮ ತಾ॥ ರಾಯಚೂರು | ಸಿಎಲ್–2 |
| 4 | ಜಂಬಣ್ಣಗೌಡ, ರಾಯಚೂರು | ಸಿಎಲ್–2 |
| 5 | ಡಿ. ವಿನೋದ್, ರಾಯಚೂರು | ಸಿಎಲ್–2 |
| 6 | ಕೆ. ಅತೀಶ್ ಕುಮಾರ, ರಾಯಚೂರು | ಸಿಎಲ್–2 |
| 7 | ಹೆಚ್.ಎಸ್ ಶ್ರೀನಿವಾಸ, ರಾಯಚೂರು | ಸಿಎಲ್–2 |
| 8 | ಎ. ಮನೋಹರ, ಯರಗೇರಾ ರಾಯಚೂರು | ಸಿಎಲ್–2 |
| 9 | ಶ್ರೀಮತಿ ಅರ್ಚನಾ, ರಾಯಚೂರು | ಸಿಎಲ್–2 |
| 10 | ವಿ. ರವಿಪ್ರಕಾಶರೆಡ್ಡಿ, ರಾಯಚೂರು | ಸಿಎಲ್–2 |
| 11 | ಡಿ. ಸಂದೀಪ್, ಗಿಲ್ಲೆಸೂಗೂರು ರಾಯಚೂರು | ಸಿಎಲ್–2 |
| 12 | ಪದ್ಮಮ್ಮ, ಯರಮರಸ್ ರಾಯಚೂರು | ಸಿಎಲ್–2 |
| 13 | ಪಿ. ಅದಿನಾರಾಯಣ, ಸ್ಟೇಷನ್ ರಸ್ತೆ ರಾಯಚೂರು | ಸಿಎಲ್–2 |
| 14 | ಎಸ್.ಎ ಸೈಯದ್, ರಾಯಚೂರು | ಸಿಎಲ್–2 |
| 15 | ಜಿ. ಶ್ರೀನಿವಾಸರೆಡ್ಡಿ, ರಾಯಚೂರು | ಸಿಎಲ್–2 |
| 16 | ಯಲ್ಲಪ್ಪ, ಕಲ್ಮಲಾ | ಸಿಎಲ್–2 |
| 17 | ಈ. ಶಿವರಾಜ, ಹುಣಸಿಹಾಳಹುಡಾ ಗ್ರಾಮ ರಾಯಚೂರು | ಸಿಎಲ್–2 |
| 18 | ಈ. ಆಂಜನೇಯ, ಗಿಲ್ಲೇಸೂಗೂರು ರಾಯಚೂರು | ಸಿಎಲ್–2 |
| 19 | ಸಂಪತ್ ಕುಮಾರ, ಲಿಂಗಸೂಗೂರು ರಸ್ತೆ ರಾಯಚೂರು | ಸಿಎಲ್–2 |
| 20 | ಎಂ.ಎಸ್.ಐ.ಎಲ್ ಸ್ಟೇಷನ್ ರಸ್ತೆ ರಾಯಚೂರು | ಸಿಎಲ್–11ಸಿ |
| 21 | ಎಂ.ಎಸ್.ಐ.ಎಲ್ ಗಂಜ್ ರಸ್ತೆ ರಾಯಚೂರು | ಸಿಎಲ್–11ಸಿ |
| 22 | ಎಂ.ಎಸ್.ಐ.ಎಲ್ ಗೋಶಾಲ ರಸ್ತೆ ರಾಯಚೂರು | ಸಿಎಲ್–11ಸಿ |
| 23 | ಎಂ.ಎಸ್.ಐ.ಎಲ್, ಚಂದ್ರಬಂಡಾ ರಾಯಚೂರು | ಸಿಎಲ್–11ಸಿ |
| 24 | ಎಂ.ಎಸ್.ಐ.ಎಲ್ ಬಿಜನಗೇರಾ ರಾಯಚೂರು | ಸಿಎಲ್–11ಸಿ |
| 25 | ಎಂ.ಎಸ್.ಐ.ಎಲ್ ವಡವಟ್ಟಿ ರಾಯಚೂರು | ಸಿಎಲ್–11ಸಿ |
| 26 | ಎಂ.ಎಸ್.ಐ.ಎಲ್, ಮರ್ಚೆಡ್ ರಾಯಚೂರು | ಸಿಎಲ್–11ಸಿ |
| 27 | ಎಂ.ಎಸ್.ಐ.ಎಲ್, ಆತ್ಕೂರು ರಾಯಚೂರು | ಸಿಎಲ್–11ಸಿ |
| 28 | ಎಂ.ಎಸ್.ಐ.ಎಲ್, ಮಲಿಯಾಬಾದ್ ರಾಯಚೂರು | ಸಿಎಲ್–11ಸಿ |
| 29 | ಎಂ.ಎಸ್.ಐ.ಎಲ್, ಮಂತ್ರಾಲಯ ರಸ್ತೆ ರಾಯಚೂರು | ಸಿಎಲ್–11ಸಿ |
| 30 | ಈ. ಆಂಜನೇಯ, ಮ್ಯಾನೇಜಿಂಗ್ ಡೈರೆಕ್ಟರ್ ವಾಸುಕೇಶವ ಡೆವಲಪರ್ಸ್ ಪ್ರೈ.ಲಿ, ರಾಯಚೂರು | ಸಿಎಲ್–6(ಎ) |
| 31 | ಮೆ॥ ಕೆ.ಕೆ ಎಂಟರ್ ಪ್ರೈಸಸ್, ರಾಯಚೂರು | ಸಿಎಲ್–7 |
| 32 | ವಿ. ಮಂಜುನಾಥ, ಸ್ಟೇಷನ್ ರಸ್ತೆ ರಾಯಚೂರು | ಸಿಎಲ್–7 |
| 33 | ಈ. ಗಣೇಶ, ಸ್ಟೇಷನ್ ರಸ್ತೆ, ರಾಯಚೂರು | ಸಿಎಲ್–7 |
| 34 | ಸೋಮ ವಿದ್ಯಾ ಸಾಗರ, ಸ್ಟೇಷನ್ ರಸ್ತೆ ರಾಯಚೂರು | ಸಿಎಲ್–7 |
| 35 | ಮೆ॥ ಪ್ರಭು ಹೋಟೆಲ್ ಪ್ರೈ.ಲಿ, ಸ್ಟೇಷನ್ ರಸ್ತೆ ರಾಯಚೂರು | ಸಿಎಲ್–7 |

| | | |
|---|---|---|
| 36 | ಈ. ಶ್ರೀನಿವಾಸ, ಅಶೋಕ ಡಿಪೋ ರಸ್ತೆ ರಾಯಚೂರು | ಸಿಎಲ್–7 |
| 37 | ಚಂದ್ರಶೇಖರ ತಂದೆ ನರಸಿಂಗಪ್ಪ, ಕಾಡ್ಲೂರು ರಾಯಚೂರು | ಸಿಎಲ್–7 |
| 38 | ಶ್ರೀಮತಿ ಪಿ. ವಿದ್ಯಾಕೃಷ್ಣಮೂರ್ತಿ, ಯರಮರಸ್ ರಾಯಚೂರು | ಸಿಎಲ್–7 |
| 39 | ಎಂ.ನಾಗರಾಜು ಗೋಶಾಲ್ ರಸ್ತೆ, ರಾಯಚೂರು | ಸಿಎಲ್–7 |
| 40 | ಎಸ್. ಶ್ರೀನಿವಾಸ ಗೌಡ, ರಾಯಚೂರು | ಸಿಎಲ್–9 |
| 41 | ಮಂಜುನಾಥ ಹಾನಗಲ್, ರಾಯಚೂರು | ಸಿಎಲ್–9 |
| 42 | ಕೆ. ಅನೀಲ್ ಕುಮಾರ, ರಾಯಚೂರು | ಸಿಎಲ್–9 |
| 43 | ವಿಶಾಲ ಕುಮಾರ, ರಾಯಚೂರು | ಸಿಎಲ್–9 |
| 44 | ಡಿ. ಶ್ರೀನಿವಾಸ, ರಾಯಚೂರು | ಸಿಎಲ್–9 |
| 45 | ಸೋಮನಾಥ ವಾರದ್, ಯರಮರಸ್ ರಾಯಚೂರು | ಸಿಎಲ್–9 |
| 46 | ಆರ್. ಈರಣ್ಣ, ರಾಯಚೂರು | ಸಿಎಲ್–9 |
| 47 | ಸೋಮನಾಗರಾಜಗೌಡ, ರಾಯಚೂರು | ಸಿಎಲ್–9 |
| 48 | ವಿ. ಲಕ್ಷ್ಮಿಕಾಂತ್, ರಾಯಚೂರು | ಸಿಎಲ್–9 |
| 49 | ಮೆ॥ ವಿ. ಲಕ್ಷ್ಮಯ್ಯ & ಕಂಪನಿ, ರಾಯಚೂರು | ಸಿಎಲ್–9 |
| 50 | ಶಿವರಾಜಪ್ಪ, ಆಸ್ಕಿಹಾಳ ರಾಯಚೂರು | ಸಿಎಲ್–9 |
| 51 | ಜಿ. ರಾಮು, ರಾಯಚೂರು | ಸಿಎಲ್–9 |
| 52 | ಶ್ರೀಮತಿ ಜಿ.ಎಂ ಸ್ವಾಮಿ, ರಾಯಚೂರು | ಸಿಎಲ್–9 |
| 53 | ಶ್ರೀಮತಿ ಎಂ. ಉಮಾದೇವಿ, ದೇವಸೂಗೂರು ರಾಯಚೂರು | ಸಿಎಲ್–9 |
| 54 | ಎಸ್. ವೆಂಕಟೇಶಗೌಡ, ರಾಯಚೂರು | ಸಿಎಲ್–9 |
| 55 | ಮೆ॥ ಪ್ರಭು ಹೋಟೆಲ್ಸ್ ಪ್ರೈ.ಲಿ, ರಾಯಚೂರು | ಸಿಎಲ್–9 |
| 56 | ಎಂ. ರಾಘವೇಂದ್ರ ಸ್ವಾಮಿ, ರಾಯಚೂರು | ಸಿಎಲ್–9 |
| 57 | ಈ. ಶ್ರೀನಿವಾಸ, ರಾಯಚೂರು | ಸಿಎಲ್–9 |
| 58 | ಸೋಮನಾಥ ವಾರದ, ರಾಯಚೂರು | ಸಿಎಲ್–9 |
| 59 | ಎಂ. ಕೃಷ್ಣೋಜಿ, ರಾಯಚೂರು | ಸಿಎಲ್–9 |
| 60 | ಎ. ಸರಳದೇವಿ, ರಾಯಚೂರು | ಸಿಎಲ್–9 |
| 61 | ಯಂಕಣ್ಣ ಯಾದವ, ರಾಯಚೂರು | ಸಿಎಲ್–9 |
| 62 | ವಿ. ಕೃಷ್ಣಮೂರ್ತಿ, ರಾಯಚೂರು | ಸಿಎಲ್–9 |
| 63 | ಆರ್. ಸತ್ಯರೆಡ್ಡಿ, ರಾಯಚೂರು | ಸಿಎಲ್–9 |
| 64 | ಎಂ. ಭಗವಾನ್, ಯರಗೇರಾ ರಾಯಚೂರು | ಸಿಎಲ್–9 |
| 65 | ಮಹಾಲಕ್ಷ್ಮೀ ಎಂಟರ್ ಪ್ರೈಸಸ್, ರಾಯಚೂರು | ಸಿಎಲ್–9 |
| 66 | ಚಂದ್ರಶೇಖರ ನಾಯಕ್, ತಲಮಾರಿ ರಾಯಚೂರು | ಸಿಎಲ್–9 |
| 67 | ಗೋವಿಂದಪ್ಪ ಚೌಧರಿ, ಮಟಮಾರಿ ರಾಯಚೂರು | ಸಿಎಲ್–9 |
| 68 | ಶ್ರೀಮತಿ ಜ್ಯೋತಿ, ಯಾಪಲದಿನ್ನಿ ರಾಯಚೂರು | ಸಿಎಲ್–9 |
| 69 | ಹ್ಯಾಂಗ್ ವೋವರ್ ವೈನ್ ಬ್ಯೂಟಿಕ್ & ವೈನ್ ಟಾವರೀನ್, ರಾಯಚೂರು. | ವೈನ್ ಟ್ಯಾವರಿನ |
| 70 | ಹ್ಯಾಂಗ್ ವೋವರ್ ವೈನ್ ಬ್ಯೂಟಿಕ್ & ವೈನ್ ಟಾವರೀನ್, ರಾಯಚೂರು. | ವೈನ್ ಬೋಟಿಕ್ |

ಕರ್ನಾಟಕ ಸರ್ಕಾರ

ಹೆಚ್‌ಡಿ 16 ಇಎಫ್‌ಎಸ್ 2020

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ,
ಬೆಂಗಳೂರು, ದಿನಾಂಕ:09.03.2020.

**ಇವರಿಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ,
ಬೆಂಗಳೂರು

195
U/S
10/03/2020

**ಇವರಿಗೆ,**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಯಶವಂತರಯಗೌಡ ವಿಠಲಗೌಡ ಪಾಟೀಲ್ (ಇಂಡಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1073ಗೆ ಉತ್ತರಿಸುವ ಕುರಿತು.

**ಉಲ್ಲೇಖ:** ಪತ್ರ ಸಂಖ್ಯೆ:ಪ್ರಶಾವಿಸ:15ನೇವಿಸ//6ಅ/ಚುಗು–ಚುರ.ಪ್ರಶ್ನೆ/04/2020, ದಿ:29.02.2020.

*****

ಮೇಲಿನ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಯಶವಂತರಯಗೌಡ ವಿಠಲಗೌಡ ಪಾಟೀಲ್ (ಇಂಡಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1073ರ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

9/3/2020
[ಬಿ.ಎನ್.ದೇವರಾಜ್]
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಪೊಲೀಸ್‌ವೆಚ್ಚ).

## ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1073

2] ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)

3] ಉತ್ತರಿಸುವ ದಿನಾಂಕ : 10.03.2020

4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶ್ರೀ ರಾಘವೇಂದ್ರ ಔರಾದ್ಕರ್ ರವರ ನೇತೃತ್ವದ ಸಮಿತಿಯು ಪೊಲೀಸ್ ಅಧಿಕಾರಿಗಳ ಹಾಗೂ ಸಿಬ್ಬಂದಿ ವರ್ಗದವರಿಗೆ ಒದಗಿಸಬೇಕಾದ ವೇತನ ಹಾಗೂ ಇತರೆ ಭತ್ಯೆಗಳು ಸೇರಿದಂತೆ ಮೊದಲಾದ ಸೌಲಭ್ಯಗಳನ್ನು ನೀಡುವ ಬಗ್ಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸುಗಳನ್ನು ಮಾಡಿದ್ದು ನಿಜವೇ; | ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಒಟ್ಟು 09 ವಿವಿಧ ವೃಂದದ ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ವೇತನ ಮತ್ತು ಭತ್ಯೆಗಳ ಪರಿಷ್ಕರಣೆ ಕುರಿತು ದಿನಾಂಕ:25.06.2019 ರಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿ ವರದಿಯನ್ನು ಸಲ್ಲಿಸಿರುತ್ತದೆ.<br><br>ಸದರಿ ವರದಿಯನ್ನು ಪರಿಶೀಲಿಸಿದ ಸರ್ಕಾರವು ಆದೇಶ ಸಂಖ್ಯೆ: ಆಇ 09 ಎಸ್‌ಆರ್‌ಪಿ 2019, ದಿನಾಂಕ:16.07.2019 ರಲ್ಲಿ 05 ವಿವಿಧ ವೃಂದದ ಪೊಲೀಸ್ ಅಧಿಕಾರಿಗಳ / ಸಿಬ್ಬಂದಿಗಳ ವೇತನವನ್ನು ಪರಿಷ್ಕರಿಸಿ ಆದೇಶಿಸಿದೆ (ಪ್ರತಿ ಲಗತ್ತಿಸಿದೆ) ಹಾಗೂ ಸರ್ಕಾರದ ವಿವಿಧ ಆದೇಶಗಳಲ್ಲಿ ಸಮವಸ್ತ್ರ ಭತ್ಯೆ, ಸಾರಿಗೆ ಭತ್ಯೆ ಹಾಗೂ ಕಷ್ಟ ಪರಿಹಾರ ಭತ್ಯೆಗಳನ್ನು ಈಗಾಗಲೇ ಮಂಜೂರು ಮಾಡಿ ಆದೇಶಿಸಿದೆ. ಒಟ್ಟಾರೆಯಾಗಿ ಸದರಿ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನದಿಂದ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 84,773 ಅಧಿಕಾರಿ ಮತ್ತು ಸಿಬ್ಬಂದಿಯವರುಗಳಿಗೆ ಅನುಕೂಲವಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಶಿಫಾರಸ್ಸು ಮಾಡಿದ್ದು ಯಾವಾಗ; ಅದರ ಅಂಶಗಳೇನು; | |
| ಇ) | ಸದರಿ ಶಿಫಾರಸ್ಸುಗಳಲ್ಲಿ ರಾಜ್ಯ ಸರ್ಕಾರವು ಎಷ್ಟು ಅಂಶಗಳನ್ನು ಅನುಷ್ಠಾನಗೊಳಿಸಿದೆ ಹಾಗೂ ಎಷ್ಟು ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರಿಗೆ ಅನುಕೂಲವಾಗಿದೆ; (ವಿವರ ನೀಡುವುದು) | |
| ಈ) | ಈ ವರದಿಯ ಶಿಫಾರಸ್ಸುಗಳು ಸಂಪೂರ್ಣವಾಗಿ ಅನುಷ್ಠಾನಗೊಳ್ಳದಿರುವುದು ಸರ್ಕಾರ ಗಮನಿಸಿದೆಯೇ; | ಇನ್ನುಳಿದ 04 ವೃಂದದ ಅಧಿಕಾರಿ/ನೌಕರರುಗಳ ವೇತನ ಶ್ರೇಣಿಯನ್ನು ಪರಿಷ್ಕರಿಸುವ ಕುರಿತಂತೆ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಉ) | ಸದರಿ ವರದಿಯನ್ನು ಯಥಾವತ್ತಾಗಿ ಅನುಷ್ಠಾನಗೊಳಿಸಿ ಎಲ್ಲಾ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರಿಗೆ ಅನುಕೂಲವಾಗುವಂತೆ ಸರ್ಕಾರ ಕೈಗೊಳ್ಳುವ ಕ್ರಮಗಳೇನು? (ವಿವರ ನೀಡುವುದು) | |

**ಹೆಚ್‌ಡಿ 16 ಇಎಫ್‌ಎಸ್ 2020**

[ಬಸವರಾಜ ಬೊಮ್ಮಾಯಿ]
ಗೃಹ ಸಚಿವರು.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪೊಲೀಸ್ ಇಲಾಖೆಯ ಕೆಲವೊಂದು ವರ್ಗದ ಹುದ್ದೆಗಳ ವೇತನ ಶ್ರೇಣಿಯನ್ನು ಮೇಲ್ದರ್ಜೆಗೇರಿಸುವ -- 6ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸುಗಳನ್ನು ಅನುಷ್ಠಾನಗೊಳಿಸುವ ಕುರಿತು.

**ಓದಲಾಗಿದೆ:**

1. ದಿನಾಂಕ: 01-06-2017ರ ಸರ್ಕಾರಿ ಆದೇಶ ಸಂಖ್ಯೆ: ಆಇ 22 ಎಸ್ಆರ್‌ಪಿ 2017.
2. ದಿನಾಂಕ: 01-03-2018ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 06 ಎಸ್ಆರ್‌ಪಿ 2018.
3. ದಿನಾಂಕ: 19-04-2018ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಎಫ್‌ಡಿ 06 ಎಸ್ಆರ್‌ಪಿ 2018.
4. ದಿನಾಂಕ: 29-05-2019ರ ಸರ್ಕಾರಿ ಆದೇಶ ಸಂಖ್ಯೆ: ಆಇ 36 ಎಸ್ಆರ್‌ಪಿ 2018.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 01-06-2017ರ ಸರ್ಕಾರಿ ಆದೇಶದನ್ವಯ ರಚಿಸಲ್ಪಟ್ಟಿದ್ದ 6ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನಂತೆ ಮುಖ್ಯ ವೇತನ ಶ್ರೇಣಿ ಮತ್ತು 25 ಸ್ಥಾಯಿ ವೇತನ ಶ್ರೇಣಿಗಳು, ಪಿಂಚಣಿ/ಕುಟುಂಬ ಪಿಂಚಣಿ ಮತ್ತು ಇತರೆ ನಿರ್ದಿಷ್ಟ ಭತ್ಯೆಗಳನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:01-03-2018ರ ಆದೇಶದಲ್ಲಿ ಪರಿಷ್ಕರಿಸಿ ಆದೇಶಗಳನ್ನು ಹೊರಡಿಸಲಾಗಿರುತ್ತದೆ.

6ನೇ ರಾಜ್ಯ ವೇತನ ಆಯೋಗವು ಸಂಪುಟ-2ರ ತನ್ನ ವರದಿಯಲ್ಲಿ ಸರ್ಕಾರದ 28 ವಿವಿಧ ಇಲಾಖೆಗಳ ವಿವಿಧ ವೃಂದಗಳ ವೇತನ ಶ್ರೇಣಿಗಳನ್ನು ಮೇಲ್ದರ್ಜೆಗೇರಿಸುವ ಮತ್ತು ನಿರ್ದಿಷ್ಟ ಹುದ್ದೆಗಳಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತದೆ. ಆದುದರಿಂದ, ವೇತನ ಆಯೋಗದ ಎರಡನೇ ಸಂಪುಟದಲ್ಲಿನ ಶಿಫಾರಸ್ಸುಗಳನ್ನು ಪರಿಶೀಲಿಸಲು, ಸರ್ಕಾರವು ಮೇಲೆ (4)ರಲ್ಲಿ ಓದಲಾದ ದಿನಾಂಕ: 29-05-2019ರ ಸರ್ಕಾರಿ ಆದೇಶದಲ್ಲಿ ಅಧಿಕಾರಿ ಸಮಿತಿಯನ್ನು ರಚಿಸಿರುತ್ತದೆ.

6ನೇ ರಾಜ್ಯ ವೇತನ ಆಯೋಗವು ಶ್ರೀ ರಾಘವೇಂದ್ರ ಔರಾದಕರ್ ಸಮಿತಿಯ ಶಿಫಾರಸ್ಸಿನ ಬೆಳಕಿನಲ್ಲಿ ಒಳಾಡಳಿತ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ, ಪೊಲೀಸ್ ಇಲಾಖೆಯಲ್ಲಿನ ನಿರ್ದಿಷ್ಟ ವೃಂದಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪೊಲೀಸ್ ಸಿಬ್ಬಂದಿಗಳ ವೇತನ ಶ್ರೇಣಿಗಳನ್ನು

ಮೇಲ್ದರ್ಜೆಗೇರಿಸಲು ಶಿಫಾರಸ್ಸು ಮಾಡಿರುತ್ತದೆ. ವೇತನ ಆಯೋಗದ ಶಿಫಾರಸ್ಸುಗಳು ಮತ್ತು ಸಂವಾದಿ 2018ರ ವೇತನ ಶ್ರೇಣಿಗಳು ಈ ಕೆಳಕಂಡಂತಿರುತ್ತವೆ:

| ಕ್ರ ಸಂ. | ಪೊಲೀಸ್ ಇಲಾಖೆಯಲ್ಲಿನ ವೃಂದ/ಹುದ್ದೆ | ಪ್ರಸ್ತುತ 2012ರ ಪರಿಷ್ಕೃತ ವೇತನ ಶ್ರೇಣಿ (ರೂ.) | ಶಿಫಾರಸ್ಸು ಮಾಡಲಾದ 2012ರ ಪರಿಷ್ಕೃತ ವೇತನ ಶ್ರೇಣಿ (ರೂ.) | ಸಂವಾದಿ 2018ರ ಪರಿಷ್ಕೃತ ವೇತನ ಶ್ರೇಣಿ (ರೂ.) |
|---|---|---|---|---|
| 1 | ಪೊಲೀಸ್ ಪೇದೆಗಳು/ಮೀಸಲು ಪೊಲೀಸ್ ಪೇದೆಗಳು | 11,600–21,000 | 12,500–24,000 | 23,500–47,650 |
| 2 | ಮುಖ್ಯ ಪೇದೆಗಳು | 12,500–24,000 | 14,550–26,700 | 27,650–52,650 |
| 3 | ಸಹಾಯಕ ಸಬ್‌ಇನ್ಸ್‌ಪೆಕ್ಟರ್ | 14,550–26,700 | 16,000–29,600 | 30,350–58,250 |
| 4 | ಪೊಲೀಸ್ ಇನ್ಸ್‌ಪೆಕ್ಟರ್ | 21,600–40,050 | 22,800–43,200 | 43,100–83,900 |
| 5 | ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ನಾನ್–ಐಪಿಎಸ್) | 36,300–53,850 | 38,100–55,200 | 70,850–1,07,100 |

ಪೊಲೀಸ್ ಇಲಾಖೆಯಲ್ಲಿನ ಈ ಮೇಲಿನ ವೃಂದಗಳ ಗುರುತರ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಗಮನದಲ್ಲಿರಿಸಿ, ಈ ಹುದ್ದೆಗಳಿಗೆ ನಿಗದಿಪಡಿಸಲಾದ ವೇತನ ಶ್ರೇಣಿಗಳನ್ನು 6ನೇ ರಾಜ್ಯ ವೇತನ ಆಯೋಗದ ಶಿಫಾರಸ್ಸಿನಂತೆ ಪರಿಷ್ಕರಿಸಲು ಸರ್ಕಾರವು ನಿರ್ಧರಿಸಿರುತ್ತದೆ.

ಅದರಂತೆ, ಈ ಕೆಳಗಿನ ಆದೇಶಗಳನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 9 ಎಸ್‌ಆರ್‌ಪಿ 2019**
**ಬೆಂಗಳೂರು, ದಿನಾಂಕ: 16ನೇ ಜುಲೈ 2019**

ಪ್ರಸ್ತಾವನೆಯಲ್ಲಿ ವಿವರಿಸಲಾದ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಮತ್ತು ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2018ರ ನಿಯಮ (4)ರ ಉಪ–ನಿಯಮ (2)ರಡಿ ಪ್ರದತ್ತವಾದ ಅಧಿಕಾರದನ್ವಯ, ಪೊಲೀಸ್ ಇಲಾಖೆಯಲ್ಲಿನ ಈ ಕೆಳಗಿನ ವೃಂದಗಳಿಗೆ ಅನ್ವಯಿಸುವ ವೇತನ ಶ್ರೇಣಿಗಳನ್ನು ದಿನಾಂಕ: 01–08–2019ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲು ಸರ್ಕಾರವು ಹರ್ಷಿಸುತ್ತದೆ.

| ಕ್ರ ಸಂ. | ಪೊಲೀಸ್ ಇಲಾಖೆಯ ವೃಂದ/ಹುದ್ದೆ | 2018ರ ಪರಿಷ್ಕೃತ ವೇತನ ಶ್ರೇಣಿ (ರೂ.) |
|---|---|---|
| 1 | ಪೊಲೀಸ್ ಪೇದೆಗಳು/ಮೀಸಲು ಪೊಲೀಸ್ ಪೇದೆಗಳು | 23,500–47,650 |
| 2 | ಮುಖ್ಯ ಪೇದೆಗಳು | 27,650–52,650 |

| | | |
|---|---|---|
| 3 | ಸಹಾಯಕ ಸಬ್‌ಇನ್ಸ್‌ಪೆಕ್ಟರ್ | 30,350-58,250 |
| 4 | ಪೊಲೀಸ್ ಇನ್ಸ್‌ಪೆಕ್ಟರ್ | 43,100-83,900 |
| 5 | ಸೂಪರಿಂಟೆಂಡೆಂಟ್ ಆಫ್ ಪೊಲೀಸ್ (ನಾನ್-ಐಪಿಎಸ್) | 70,850-1,07,100 |

2. ಈ ಮೇಲೆ ನಮೂದಿಸಿರುವ ವೃಂದಗಳಲ್ಲಿ ಹುದ್ದೆಗಳನ್ನು ಧಾರಣೆ ಮಾಡಿರುವ ಸಿಬ್ಬಂದಿಗಳ ವೇತನವನ್ನು ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 43ರಲ್ಲಿನ ಅವಕಾಶಗಳನ್ವಯ ನಿಗದಿಪಡಿಸತಕ್ಕದ್ದು.

3. ವೇತನ ನಿಗದೀಕರಣಕ್ಕೆ ಸಂಬಂಧಿಸಿದಂತೆ ಆದೇಶಗಳು/ಅಧಿಸೂಚನೆಗಳು/ನಿಯಮಗಳಲ್ಲಿ ತಿಳಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರೆದು ಅನ್ವಯಿಸುತ್ತವೆ.

4. ಈ ಮೇಲಿನ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ವೇತನ ನಿಗದಿಪಡಿಸುವಲ್ಲಿ ಸಮಸ್ಯೆಗಳು ಉಂಟಾದಲ್ಲಿ ಅದನ್ನು ಆದೇಶಕ್ಕಾಗಿ ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಡಿ.ಎಸ್.ಜೋಗೋಜೆ)
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು-2).
BHR 16/7/19

ಸಂಕಲನಕಾರರು, ಕರ್ನಾಟಕ ಗೆಜೆಟ್, ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವುದಕ್ಕಾಗಿ ಹಾಗೂ 50 ಪ್ರತಿಗಳನ್ನು ಆರ್ಥಿಕ ಇಲಾಖೆಗೆ ಸರಬರಾಜು ಮಾಡಲು.

ಇವರಿಗೆ:

1. ಸರ್ಕಾರದ ಮುಖ್ಯ ಕಾರ್ಯದರ್ಶಿ/ಅಪರ ಮುಖ್ಯ ಕಾರ್ಯದರ್ಶಿಗಳು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು.
3. ಘನತೆವೆತ್ತ ರಾಜ್ಯಪಾಲರ ವಿಶೇಷ ಕಾರ್ಯದರ್ಶಿ, ರಾಜಭವನ, ಬೆಂಗಳೂರು-1
4. ಪ್ರಧಾನ ಮಹಾಲೇಖಪಾಲರು (G&SSA), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ,(ಪಿ.ಬಿ. ನಂ.5398) ಬೆಂಗಳೂರು.
5. ಪ್ರಧಾನ ಮಹಾಲೇಖಪಾಲರು (E&RSA), ಕರ್ನಾಟಕ, ಹೊಸ ಕಟ್ಟಡ, ಆಡಿಟ್ ಭವನ,(ಪಿ.ಬಿ. ನಂ.5398) ಬೆಂಗಳೂರು.
6. ಪ್ರಧಾನ ಮಹಾಲೇಖಪಾಲರು (ಲೆಕ್ಕಗಳು ಮತ್ತು ಹಕ್ಕುಗಳು), ಕರ್ನಾಟಕ, ಪಾರ್ಕ್‌ಹೌಸ್ ರಸ್ತೆ, (ಪಿ.ಬಿ. ನಂ.5329) ಬೆಂಗಳೂರು.
7. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು
8. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬಹುಮಹಡಿ ಕಟ್ಟಡ, ಬೆಂಗಳೂರು
9. ಡೈರೆಕ್ಟರ್ ಜನರಲ್ & ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ನೃಪತುಂಗ ರೋಡ್, ಬೆಂಗಳೂರು.
10. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.
11. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು.
12. ಸರ್ಕಾರದ ಉಪ ಕಾರ್ಯದರ್ಶಿ, ಸಚಿವ ಸಂಪುಟ ಶಾಖೆ, ವಿಧಾನ ಸೌಧ, ಬೆಂಗಳೂರು.
13. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು.
14. ಎಲ್ಲಾ ಜಿಲ್ಲೆಗಳ ಸೂಪರಿಂಟೆಂಡೆಂಟ್ ಆಫ್ ಪೊಲೀಸ್
15. ಖಜಾನೆ ಅಧಿಕಾರಿ, ರಾಜ್ಯ ಹುಜೂರು ಖಜಾನೆ/ಜಿಲ್ಲಾ ಖಜಾನೆಗಳು.
16. ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ವಿಕಾಸ ಸೌಧ, ಬೆಂಗಳೂರು.
17. ಪ್ರಾಜೆಕ್ಟ್ ಆಫೀಸರ್, ಹೆಚ್.ಆರ್.ಎಂ.ಎಸ್., ಕೊಠಡಿ ಸಂಖ್ಯೆ:145'A', ಬಹುಮಹಡಿಗಳ ಕಟ್ಟಡ, ಬೆಂಗಳೂರು.
18. ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯ/ವಿಧಾನ ಮಂಡಲದ ಗ್ರಂಥಾಲಯ.
19. ವಾರಪತ್ರ/ಶಾಖೆಯ ರಕ್ಷಾ ಕಡತ.

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 22 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

160
GIS
10/03/2020

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸಿದ್ದು ಸವದಿ (ತೇರದಾಳ))** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1053** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸಿದ್ದು ಸವದಿ (ತೇರದಾಳ))** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1053** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagei

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1053
ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರ ಪಂಪ್‌ಸೆಟ್‌ಗಳಿಗೆ ಯಾವ ರೀತಿ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ; (ಸಂಪೂರ್ಣ ಮಾಹಿತಿ ಒದಗಿಸುವುದು) | ರಾಜ್ಯ ಸರ್ಕಾರದ ಆದೇಶದನ್ವಯ, ರಾಜ್ಯದಲ್ಲಿ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಹಗಲಿನ ವೇಳೆ 4 ಗಂಟೆಗಳ ಕಾಲ ಮತ್ತು ರಾತ್ರಿಯ ವೇಳೆಯಲ್ಲಿ 3 ಗಂಟೆಗಳ ಕಾಲ, ಒಟ್ಟು ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ. ತಾಂತ್ರಿಕ ಸಾಧ್ಯತೆ ಇರುವ ಕಡೆ ಹಗಲಿನ ವೇಳೆಯಲ್ಲಿಯೇ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್‌ನ್ನು ಕೃಷಿ ಪಂಪ್‌ಸೆಟ್‌ಗಳಿಗೆ ಸರಬರಾಜು ಮಾಡಲಾಗುತ್ತಿದೆ. |
| ಆ) | ಜಮೀನುಗಳಲ್ಲಿ ವಾಸವಿರುವ ಗುಂಪು ಮನೆಗಳಿಗೆ ಕೇವಲ ದೀಪದ ಸಲುವಾಗಿ ನಿರಂತರ ವಿದ್ಯುತ್ ಒದಗಿಸಲು ಇರುವ ತೊಂದರೆಗಳೇನು; | ನಿರಂತರ ಜ್ಯೋತಿ ಯೋಜನೆಯ ಪ್ರಮುಖ ಉದ್ದೇಶವು ಗ್ರಾಮೀಣ ಪ್ರದೇಶದಲ್ಲಿರುವ ವಿದ್ಯುತ್ ಹೊರೆಯನ್ನು ಕೃಷಿ ಮತ್ತು ಕೃಷಿಯೇತರ ವಿದ್ಯುತ್ ಹೊರೆಯನ್ನಾಗಿ ಬೇರ್ಪಡಿಸುವ ಯೋಜನೆಯಾಗಿರುತ್ತದೆ. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿರುವ ಕೃಷಿಯೇತರ ಸ್ಥಾವರಗಳಿಗೆ 24 ಗಂಟೆ ಗುಣಮಟ್ಟದ ನಿರಂತರ ವಿದ್ಯುತ್‌ನ್ನು ಸರಬರಾಜು ಮಾಡಲಾಗುತ್ತಿದೆ.<br>ಜಮೀನಿನಲ್ಲಿ ವಾಸವಿರುವ ಗುಂಪು ಮನೆಗಳು ಹಳ್ಳಿಯಿಂದ ದೂರದ ಜಮೀನಿನಲ್ಲಿರುವುದರಿಂದ ನಿರಂತರ ಜ್ಯೋತಿ ಮಾರ್ಗವು ಬಹುದೂರ ವಿಸ್ತರಿಸಬೇಕಾಗುತ್ತದೆ. ಇದರಿಂದಾಗಿ, ಟ್ರಾನ್ಸ್‌ಮಿಷನ್ ನಷ್ಟ ಅಧಿಕವಾಗುವುದರ ಜೊತೆಗೆ ಮಾರ್ಗ ವಿಸ್ತರಣೆಯುಆರ್ಥಿಕವಾಗಿ ಕಾರ್ಯಸಾಧುವಲ್ಲ.<br>ನಿರಂತರ ಜ್ಯೋತಿ ವಿದ್ಯುತ್ ಮಾರ್ಗವು ವಿಸ್ತರಿಸಿದಲ್ಲಿ ಸದರಿ ಮಾರ್ಗದಲ್ಲಿ ಬರುವ ಕೃಷಿ ಪಂಪ್‌ಸೆಟ್‌ಗಳು ನಿರಂತರ ವಿದ್ಯುತ್ ಉಪಯೋಗಿಸುವ ಸಂಭವವಿರುವುದರಿಂದ ಈ ಯೋಜನೆಯ ಮುಖ್ಯ ಉದ್ದೇಶವು ವಿಫಲವಾಗುತ್ತದೆ. |

| | | |
|---|---|---|
| ಇ) | ಈಗಾಗಲೇ ತೋಟದ ವಸತಿಗಳಿಗೆ ನಿರಂತರ ಜ್ಯೋತಿ ಯೋಜನೆ ಅಡಿಯಲ್ಲಿ ವಿದ್ಯುತ್‌ನ್ನು ಎಲ್ಲಿ ಒದಗಿಸಲು ಮತ್ತು ಎಷ್ಟು ವಸತಿಗಳಿಗೆ ಒದಗಿಸಲು ಮನವಿಗಳು ಸಲ್ಲಿಕೆಯಾಗಿವೆ? (ಜಿಲ್ಲಾವಾರು ಮಾಹಿತಿ ನೀಡುವುದು) | ನಿರಂತರ ಜ್ಯೋತಿ ಯೋಜನೆಯಡಿ ತೋಟದ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಅರ್ಜಿಗಳು ಸ್ವೀಕೃತವಾಗಿರುವುದಿಲ್ಲ. ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ 85 ಅರ್ಜಿಗಳು, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದಲ್ಲಿ 740 ಅರ್ಜಿಗಳು ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯಲ್ಲಿ 60 ಅರ್ಜಿಗಳು ಸ್ವೀಕೃತವಾಗಿದ್ದು, ಅವುಗಳ ಜಿಲ್ಲಾವಾರು ವಿವರಗಳು ಕೆಳಕಂಡಂತಿವೆ:– |

| ಕ್ರ. ಸಂ. | ಜಿಲ್ಲೆ | ಸ್ವೀಕೃತಗೊಂಡ ಅರ್ಜಿಗಳ ಸಂಖ್ಯೆ |
|---|---|---|
| 1 | ಶಿವಮೊಗ್ಗ | 85 |
| 2 | ಮೈಸೂರು | 444 |
| 3 | ಚಾಮರಾಜನಗರ | 58 |
| 4 | ಮಂಡ್ಯ | 75 |
| 5 | ಹಾಸನ | 163 |
| 6 | ಹಾವೇರಿ | 11 |
| 7 | ಬೆಳಗಾವಿ | 19 |
| 8 | ಬಾಗಲಕೋಟೆ | 20 |
| 9 | ವಿಜಯಪುರ | 10 |
| | **ಒಟ್ಟು** | **885** |

**ಸಂಖ್ಯೆ:** ಎನರ್ಜಿ 22 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 15 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

128
UQ
10/03/2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ರಾಮಸ್ವಾಮಿ ಎ.ಟಿ. (ಅರಕಲಗೂಡು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **529** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ರಾಮಸ್ವಾಮಿ ಎ.ಟಿ. (ಅರಕಲಗೂಡು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **529** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದಪ್ರಶ್ನೆ ಸಂಖ್ಯೆ : 529
ಸದಸ್ಯರ ಹೆಸರು : ಶ್ರೀ ರಾಮಸ್ವಾಮಿ ಎ. ಟಿ. (ಅರಕಲಗೂಡು)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಹೊಳೆನರಸೀಪುರ ಚೆಸ್ಕಾಂ ವಿಭಾಗದ ವ್ಯಾಪ್ತಿಯ 8 ಏತ ನೀರಾವರಿ ಯೋಜನೆಗಳಿಗೆ ವಿದ್ಯುತ್ ಸಂಪರ್ಕವನ್ನು ಸ್ಥಗಿತಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ಯಾವ ಉದ್ದೇಶಕ್ಕಾಗಿ ವಿದ್ಯುತ್ ಸಂಪರ್ಕವನ್ನು ಸ್ಥಗಿತಗೊಳಿಸಲಾಗಿದೆ; | ಕಾವೇರಿ ನೀರಾವರಿ ನಿಗಮದ ಅಧೀನದಲ್ಲಿ ಬರುವ ಹೊಳೆನರಸೀಪುರ ವಿಭಾಗದ 8 ಏತ ನೀರಾವರಿ ಸ್ಥಾವರಗಳಿಗೆ ಕಳೆದ 5 ವರ್ಷಗಳಿಂದ ವಿದ್ಯುತ್ ಶುಲ್ಕದ ಮೊತ್ತ ರೂ.24.37 ಕೋಟಿ ಬಾಕಿ ಇರುವುದರಿಂದ, ನಿಗಮದ ನಿಯಮಾನುಸಾರ ಮತ್ತು ಘನ ಕೆ.ಇ.ಆರ್.ಸಿ ನಿರ್ದೇಶನಗಳಂತೆ ವಿದ್ಯುತ್ ಸಂಪರ್ಕವನ್ನು ದಿನಾಂಕ: 03-02-2020 ರಿಂದ ಸ್ಥಗಿತಗೊಳಿಸಲಾಗಿದೆ. |
| ಇ) | ಅವುಗಳಿಗೆ ವಿದ್ಯುತ್ ಸಂಪರ್ಕವನ್ನು ಒದಗಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಸದರಿ 8 ಏತ ನೀರಾವರಿ ಸ್ಥಾವರಗಳಿಗೆ ಸ್ಥಗಿತಗೊಳಿಸಲಾಗಿದ್ದ ವಿದ್ಯುತ್ ಸಂಪರ್ಕವನ್ನು ಪುನರ್‌ಸ್ಥಾಪಿಸಲಾಗಿದೆ. |

**ಸಂಖ್ಯೆ:** ಎನರ್ಜಿ15ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

**ಸಂಖ್ಯೆ:** ಇಎನ್ 18 ಪಿಪಿಎಂ 2020

51
LS
10/03/2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **854** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **854** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagai

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 854

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸಬೇಕಾದ ದಿನಾಂಕ : 10-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ತಾಲ್ಲೂಕಿನಲ್ಲಿರುವ ಇಂಧನ ಇಲಾಖೆಯ ಕಛೇರಿಗಳಿಗೆ ಮಂಜೂರಾದ ಹುದ್ದೆಗಳ ಒಟ್ಟು ಸಂಖ್ಯೆ ಎಷ್ಟು; | ಕಿತ್ತೂರು ತಾಲ್ಲೂಕಿನಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವಿದ್ಯುತ್ ಉಪಕೇಂದ್ರಗಳು ಹಾಗೂ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಕಛೇರಿಗಳು ಕಾರ್ಯನಿರ್ವಹಿಸುತ್ತಿದ್ದು, ಸದರಿ ಕಛೇರಿಗಳಲ್ಲಿ ಮಂಜೂರಾದ ಮತ್ತು ಖಾಲಿ ಇರುವ ಹುದ್ದೆಗಳ ವಿವರಗಳು ಕೆಳಕಂಡಂತಿವೆ. |
| ಆ) | ಈ ತಾಲ್ಲೂಕಿನಲ್ಲಿ ಇಂಧನ ಇಲಾಖೆಯ ಕಛೇರಿಗಳಲ್ಲಿ ಭರ್ತಿಯಾಗದೇ ಖಾಲಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು; | (ಕೆಳಗಿನ ಕೋಷ್ಟಕ) |
| ಇ) | ಸದರಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕಿತ್ತೂರು ತಾಲ್ಲೂಕಿನಲ್ಲಿರುವ ಖಾಲಿ ಹುದ್ದೆಗಳಿಗೆ ಪ್ರತ್ಯೇಕವಾಗಿ ಯಾವುದೇ ನೇಮಕಾತಿಯನ್ನು ಕೈಗೊಳ್ಳಲಾಗಿರುವುದಿಲ್ಲ. ಆದಾಗ್ಯೂ ಕಿತ್ತೂರು ತಾಲ್ಲೂಕಿನಲ್ಲಿ ಖಾಲಿ ಇರುವ ಕವಿಪ್ರನಿನಿ ಮತ್ತು ಹೆಸ್ಕಾಂ ಕಂಪನಿಯ ಹುದ್ದೆಗಳ ಅವಶ್ಯಕತೆಗನುಗುಣವಾಗಿ ನೇರ ನೇಮಕಾತಿ ಮೂಲಕ ಮತ್ತು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಜ್ಯೇಷ್ಠತಾ ಪಟ್ಟಿ ಪ್ರಕರಣವು ಇತ್ಯರ್ಥಗೊಂಡ ನಂತರ ಪದೋನ್ನತಿ ನೀಡುವುದರ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |

| ನಿಗಮ / ಕಂಪನಿ | ಮಂಜೂರಾದ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ |
|---|---|---|
| ಕ.ವಿ.ಪ್ರ.ನಿ.ನಿ | 23 | 9 |
| ಹು.ವಿ.ಸ.ಕಂ | 109 | 55 |

ಸಂಖ್ಯೆ: ಎನರ್ಜಿ 18 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 24 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

152
US
10/03/2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಶಿವಾನಂದ ಪಾಟೀಲ್** (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1062** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಶಿವಾನಂದ ಪಾಟೀಲ್ (ಬಸವನಬಾಗೇವಾಡಿ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1062** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1062
ಸದಸ್ಯರ ಹೆಸರು : ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಬಸವನಬಾಗೇವಾಡಿಯಲ್ಲಿನ 220 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದ ನಿರ್ವಹಣೆಗಾಗಿ ಕಾರ್ಯನಿರ್ವಹಿಸುತ್ತಿದ್ದ ಕಾರ್ಯನಿರ್ವಾಹಕ ಅಭಿಯಂತರರ ಹುದ್ದೆಯನ್ನೊಳಗೊಂಡ ವಿಭಾಗ ಕಛೇರಿಯನ್ನು ಯಾವ ಕಡೆಗೆ ಸ್ಥಳಾಂತರ ಮಾಡಲಾಗಿದೆ ಹಾಗೂ ಯಾವ ಕಾರಣಕ್ಕಾಗಿ ಸ್ಥಳಾಂತರಿಸಲಾಗಿದೆ; | ಬಸವನಬಾಗೇಡಿಯಲ್ಲಿನ 220 ಕೆ.ವಿ. ವಿದ್ಯುತ್ ಸ್ವೀಕರಣಾ ಕೇಂದ್ರದ ನಿರ್ವಹಣೆಗಾಗಿ ಕಾರ್ಯನಿರ್ವಹಿಸುತ್ತಿದ್ದ ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಹುದ್ದೆಯನ್ನು ಆಡಳಿತಾತ್ಮಕ ಕಾರಣಗಳಿಂದ ಆರ್.ಟಿ. ಮತ್ತು ಆರ್&ಡಿ, ನಿಗಮ ಕಾರ್ಯಾಲಯ, ಕ.ವಿ.ಪ್ರ.ನಿ.ನಿ., ಕಾವೇರಿ ಭವನ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಲಾಗಿರುತ್ತದೆ.<br>ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಅವಶ್ಯಕತೆಗೆ ತಕ್ಕಂತೆ 220 ಕೆ.ವಿ. ವಿದ್ಯುತ್ ಉಪಕೇಂದ್ರಗಳನ್ನು ವರ್ಷದಿಂದ ವರ್ಷಕ್ಕೆ ಹೆಚ್ಚಳ ಮಾಡುತ್ತಿದ್ದು, ಆರ್ಥಿಕ ವೆಚ್ಚ ಹಿತದೃಷ್ಟಿಯಿಂದ ಎಲ್ಲಾ 220 ಕೆ.ವಿ. ವಿದ್ಯುತ್ ಉಪಕೇಂದ್ರಗಳಲ್ಲಿ ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಹುದ್ದೆಯನ್ನು ಮಂಜೂರು ಮಾಡಲು ಸಾಧ್ಯವಾಗುತ್ತಿಲ್ಲ. ಹಾಲಿ 220 ಕೆ.ವಿ. ವಿದ್ಯುತ್ ಉಪಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಗಳನ್ನು ಅಗತ್ಯತೆಗೆ ತಕ್ಕಂತೆ ಬೇರೆಡೆಗೆ ಸ್ಥಳಾಂತರಿಸಲಾಗುತ್ತಿದೆ. |
| ಆ) | ಸದರಿ ಕೇಂದ್ರದ ಸುಗಮ ಕಾರ್ಯನಿರ್ವಹಣೆಗೆ ಕಾರ್ಯನಿರ್ವಾಹಕ ಅಭಿಯಂತರರ ಹುದ್ದೆಯನ್ನೊಳಗೊಂಡ ವಿಭಾಗ ಕಛೇರಿಯನ್ನು ಪುನ: ಪ್ರಾರಂಭಿಸಲು ಸರ್ಕಾರ ಆಸಕ್ತಿ ವಹಿಸುವುದೇ; | ಆರ್ಥಿಕ ವೆಚ್ಚದ ಹಿತದೃಷ್ಟಿಯಿಂದ 220 ಕೆ.ವಿ. ವಿದ್ಯುತ್ ಉಪಕೇಂದ್ರಗಳಲ್ಲಿ ವಿಭಾಗ ಕಛೇರಿಗಳನ್ನು ತೆರೆಯುವ ಪ್ರಸ್ತಾವನೆಗಳನ್ನು ಕೈಬಿಡಲಾಗಿದೆ. |
| ಇ) | ಹಾಗಿದ್ದಲ್ಲಿ, ಸದರಿ ಕೇಂದ್ರಕ್ಕೆ ಅವಶ್ಯಕವಿರುವ ಕಾರ್ಯನಿರ್ವಾಹಕ ಅಭಿಯಂತರರ ಹುದ್ದೆಯನ್ನೊಳಗೊಂಡ ವಿಭಾಗ ಕಛೇರಿಯನ್ನು ಪ್ರಾರಂಭಿಸಲು ಯಾವ ಕಾಲಮಿತಿಯೊಳಗೆ ಸರ್ಕಾರ ಕ್ರಮ ಕೈಗೊಳ್ಳುವುದು? | ವಿಭಾಗ ಕಛೇರಿಯನ್ನು ತೆರೆಯುವ ಪ್ರಸ್ತಾವನೆಯನ್ನು ಕೈಬಿಡಲಾಗಿದ್ದು, ಪ್ರಸ್ತುತ, 220 ಕೆ.ವಿ. ವಿದ್ಯುತ್ ಉಪಕೇಂದ್ರಗಳ ನಿರ್ವಹಣೆಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಗಳನ್ನು ನೇಮಿಸಲಾಗುತ್ತಿದೆ. |

ಸಂಖ್ಯೆ: ಎನರ್ಜಿ 24 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 26 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

107
9/5
10/3/20

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಮುನಿಯಪ್ಪ** ವಿ. **(ಶಿಡ್ಲಘಟ್ಟ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1111** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಮುನಿಯಪ್ಪ** ವಿ. **(ಶಿಡ್ಲಘಟ್ಟ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1111** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1111
ಸದಸ್ಯರ ಹೆಸರು : ಶ್ರೀ ಮುನಿಯಪ್ಪ ವಿ. (ಶಿಡ್ಲಘಟ್ಟ)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಶಿಡ್ಲಘಟ್ಟ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮಾಂತರ ಪ್ರದೇಶಗಳಲ್ಲಿ ಹಳೆಯ ಕಬ್ಬಿಣದ ವಿದ್ಯುತ್ ಕಂಬ ಮತ್ತು ಹಳೆಯ ವಿದ್ಯುತ್ ತಂತಿಗಳನ್ನು ಬದಲಾವಣೆ ಮಾಡುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ಗ್ರಾಮಾಂತರ ಪ್ರದೇಶಗಳಲ್ಲಿ ಡಿಸೆಂಬರ್ 2019ರ ಅಂತ್ಯದವರೆಗೆ 42 ಗ್ರಾಮಗಳಲ್ಲಿ ಒಟ್ಟು 405 ಸಂಖ್ಯೆಯ ಕಬ್ಬಿಣದ ವಿದ್ಯುತ್ ಕಂಬಗಳನ್ನು ಗುರುತಿಸಲಾಗಿದ್ದು, ಅವುಗಳ ಪೈಕಿ 96 ಸಂಖ್ಯೆಯ ಕಬ್ಬಿಣದ ವಿದ್ಯುತ್ ಕಂಬಗಳನ್ನು ಬದಲಾಯಿಸಲಾಗಿರುತ್ತದೆ ಹಾಗೂ 177 ಗ್ರಾಮಗಳಲ್ಲಿ ಒಟ್ಟು 389.10 ಕಿ.ಮೀ.ನಷ್ಟು ಉದ್ದದ ಹಳೆಯ ವಿದ್ಯುತ್ ತಂತಿಗಳನ್ನು ಗುರುತಿಸಲಾಗಿದ್ದು, ಅವುಗಳ ಪೈಕಿ 186 ಕಿ.ಮೀ.ನಷ್ಟು ಉದ್ದದ ವಿದ್ಯುತ್ ತಂತಿಯನ್ನು ಬದಲಾಯಿಸಲಾಗಿರುತ್ತದೆ. ವಿವರಗಳು ಕೆಳಕಂಡಂತಿವೆ:- |
| ಆ) | ಹಾಗಿದ್ದಲ್ಲಿ, ಇದುವರೆಗೆ ಎಷ್ಟು ಗ್ರಾಮಗಳಲ್ಲಿ ಬದಲಾವಣೆ ಮಾಡಲಾಗಿದೆ ವಿವರಗಳನ್ನು ಒದಗಿಸುವುದು; ಇನ್ನೂ ಬಾಕಿ ಇರುವ ಗ್ರಾಮಗಳು ಎಷ್ಟು; (ವಿವರ ಒದಗಿಸುವುದು) | |
| ಇ) | ಇವುಗಳನ್ನು ಸಂಪೂರ್ಣವಾಗಿ ತೆಗೆಯಲು ಕಾಲಾವಕಾಶ ನಿಗದಿಯಾಗಿದೆಯೇ; (ವಿವರ ಒದಗಿಸುವುದು) | (ಕೆಳಗಿನ ಕೋಷ್ಟಕ ನೋಡಿ) ಬದಲಾಯಿಸಲು ಬಾಕಿ ಇರುವ ಕಬ್ಬಿಣದ ವಿದ್ಯುತ್ ಕಂಬಗಳನ್ನು ಮತ್ತು ವಿದ್ಯುತ್ ತಂತಿಗಳನ್ನು ಶೀಘ್ರವಾಗಿ ಬದಲಾಯಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ) | ಕ್ಷೇತ್ರದ ಹಲವಾರು ಗ್ರಾಮಗಳಲ್ಲಿ ಶಾಲಾ-ಕಾಲೇಜ್ ಮತ್ತು ದೇವಾಲಯಗಳ ಬಳಿ ವಿದ್ಯುತ್ ಪರಿವರ್ತಕಗಳು ಇರುವುದರಿಂದ ಶಾಲಾ ಕಾಲೇಜ್ ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಶಾಲಾ-ಕಾಲೇಜು ಹಾಗೂ ದೇವಾಲಯಗಳ ಬಳಿ ಇರುವ 39 ಸಂಖ್ಯೆಯ ವಿದ್ಯುತ್ ಪರಿವರ್ತಕಗಳನ್ನು ಸೂಕ್ತ ಸ್ಥಳಗಳಿಗೆ ಸ್ಥಳಾಂತರಿಸಲಾಗಿದೆ. |
| ಉ) | ಹಾಗಿದ್ದಲ್ಲಿ, ಇಂತಹ ವಿದ್ಯುತ್ ಪರಿವರ್ತಕಗಳನ್ನು ಬೇರೆ ಕಡೆಗೆ ಸ್ಥಳಾಂತರಿಸಲು ಕೈಗೊಂಡ ಕ್ರಮಗಳೇನು; | |

| ಕಬ್ಬಿಣದ ವಿದ್ಯುತ್ ಕಂಬಗಳನ್ನು ಬದಲಾಯಿಸಲಾದ ಗ್ರಾಮಗಳ ಸಂಖ್ಯೆ | ಕಬ್ಬಿಣದ ವಿದ್ಯುತ್ ಕಂಬಗಳನ್ನು ಬದಲಾಯಿಸಲು ಬಾಕಿ ಇರುವ ಗ್ರಾಮಗಳ ಸಂಖ್ಯೆ | ಹಳೆಯ ವಿದ್ಯುತ್ ತಂತಿಗಳನ್ನು ಬದಲಾಯಿಸಲಾದ ಗ್ರಾಮಗಳ ಸಂಖ್ಯೆ | ಹಳೆಯ ವಿದ್ಯುತ್ ತಂತಿಗಳನ್ನು ಬದಲಾಯಿಸಲು ಬಾಕಿ ಇರುವ ಗ್ರಾಮಗಳ ಸಂಖ್ಯೆ |
|---|---|---|---|
| 15 | 27 | 124 | 53 |

| | | |
|---|---|---|
| ಊ) | ಈ ಕ್ಷೇತ್ರದಲ್ಲಿ ಇದುವರೆಗೆ ಎಷ್ಟು ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದೆ; | ಶಿಡ್ಲಘಟ್ಟ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿರುವ 280 ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿಯಲ್ಲಿ ಈಗಾಗಲೇ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲಾಗಿರುತ್ತದೆ. ಸದರಿ ಯೋಜನೆಯಡಿ ವಿದ್ಯುತ್ ಸಂಪರ್ಕವನ್ನು ಕಲ್ಪಿಸಲು ಯಾವುದೇ ಗ್ರಾಮವು ಬಾಕಿ ಇರುವುದಿಲ್ಲ. |
| ಋ) | ಇನ್ನು ಎಷ್ಟು ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ ಕಲ್ಪಿಸಬೇಕಾಗಿರುತ್ತದೆ? (ವಿವರ ಒದಗಿಸುವುದು) | |

**ಸಂಖ್ಯೆ: ಎನರ್ಜಿ 26 ಪಿಪಿಎಂ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 17 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

98
US
10/03/2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಹೇಶ್ ಎನ್ (ಕೊಳ್ಳೇಗಾಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **822** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಹೇಶ್ ಎನ್ (ಕೊಳ್ಳೇಗಾಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **822** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagi
(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 822
ಸದಸ್ಯರ ಹೆಸರು : ಶ್ರೀ ಮಹೇಶ್ ಎನ್ (ಕೊಳ್ಳೇಗಾಲ)
ಉತ್ತರಿಸಬೇಕಾದ ದಿನಾಂಕ : 10-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ಉಚಿತ ವಿದ್ಯುತ್ ಸಂಪರ್ಕ ನೀಡಲು ಹಾಗೂ ಬಿಲ್ ಮೊತ್ತವನ್ನು ಸಬ್ಸಿಡಿ ನೀಡಲು ಇರುವ ಮಾರ್ಗದರ್ಶಿ ಸೂತ್ರಗಳೇನು; | ರಾಜ್ಯದಲ್ಲಿ ಬಡತನ ರೇಖೆಗಿಂತ ಕೆಳಗಿರುವ (BPL) ಕುಟುಂಬಗಳಿಗೆ ಭಾಗ್ಯಜ್ಯೋತಿ / ಕುಟೀರ ಜ್ಯೋತಿ ಯೋಜನೆಯಡಿ ಮಾಸಿಕ 40 ಯೂನಿಟ್‌ಗಳವರೆಗೆ ಉಚಿತ ವಿದ್ಯುತ್ ಒದಗಿಸಲಾಗುತ್ತಿದೆ.<br><br>ಈ ಯೋಜನೆಯಡಿ ಪ್ರತಿ ಸ್ಥಾವರಕ್ಕೆ 1 ಬಲ್ಬ್‌ಗೆ ಅವಕಾಶ ಕಲ್ಪಿಸಿ ಸ್ಥಾವರಕ್ಕೆ ಜೋಡಣೆ ಹೊರೆ (Connected Load) 100 ವ್ಯಾಟ್ಸ್ ಎಂದು ಊಹಿಸಿ ಪ್ರತಿ ದಿನ 6 ಗಂಟೆಗಳ ಬಳಕೆಯಿಂದ ತಿಂಗಳಿಗೆ 18 ಯೂನಿಟ್ ಬಳಕೆಯಾಗುತ್ತದೆಂದು ಅಂದಾಜಿಸಿರುತ್ತದೆ. ಅದರಂತೆ ಭಾಗ್ಯಜ್ಯೋತಿ / ಕುಟೀರ ಜ್ಯೋತಿ ಸ್ಥಾವರಗಳಿಗೆ ಪ್ರತಿ ತಿಂಗಳು 18 ಯೂನಿಟ್‌ಗಳ ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಿ ಸದರಿ ಬಳಕೆಯ ಪ್ರಮಾಣಕ್ಕೆ ಸರ್ಕಾರವು ಸಬ್ಸಿಡಿ ನೀಡಿರುವುದಾಗಿರುತ್ತದೆ. ಈ ಸಂಬಂಧ ಸರ್ಕಾರಿ ಆದೇಶ ಸಂಖ್ಯೆ ಇಎನ್ 145 ಪಿಎಸ್‌ಆರ್ 2004 ದಿನಾಂಕ: 15.03.2005ರಲ್ಲಿ ಆದೇಶ ಹೊರಡಿಸಲಾಗಿರುತ್ತದೆ.<br><br>ಭಾಗ್ಯಜ್ಯೋತಿ / ಕುಟೀರ ಜ್ಯೋತಿ ಸ್ಥಾವರಗಳಿಗೆ ಉಚಿತವಾಗಿ ನೀಡುತ್ತಿರುವ (ಮಾಸಿಕವಾಗಿ) ವಿದ್ಯುತ್ ಮಿತಿಯನ್ನು 18 ಯೂನಿಟ್‌ಗಳಿಂದ 40 ಯೂನಿಟ್‌ಗಳವರೆಗೆ ಹೆಚ್ಚಿಸಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 12 ಪಿಎಸ್‌ಆರ್ 2017 ದಿನಾಂಕ: 29.05.2017ಅನ್ನು ಹೊರಡಿಸಿದೆ.<br><br>ಸರ್ಕಾರದ ನೀತಿಯಂತೆ ಮತ್ತು ಕ.ವಿ.ನಿ. ಆಯೋಗದ ವಿದ್ಯುಚ್ಛಕ್ತಿ ದರಗಳ ಆದೇಶದಂತೆ ಭಾಗ್ಯಜ್ಯೋತಿ / ಕುಟೀರ ಜ್ಯೋತಿ" ಸ್ಥಾಪನೆಗಳಲ್ಲಿ, ಒಂದಕ್ಕಿಂತ ಹೆಚ್ಚು ಪಾಯಿಂಟುಗಳಿದ್ದರೆ ಅಥವಾ ಮಾಸಿಕ ಬಳಕೆಯು 40 ಯೂನಿಟ್‌ಗಳನ್ನು ಮೀರಿದ್ದರೆ, ಅಂತಹ ಸ್ಥಾಪನಗಳಿಗೆ ವಿದ್ಯುತ್ ದರ ಅನುಸೂಚಿ LT-2(a) ಪ್ರಕಾರ ಬಿಲ್ ಮಾಡಲಾಗುತ್ತಿದೆ. |
| ಆ) | ಭಾಗ್ಯಜ್ಯೋತಿ, ಕುಟೀರ ಜ್ಯೋತಿ ಯೋಜನೆಯಡಿಯಲ್ಲಿ 40 ಯೂನಿಟ್‌ಗಳವರೆಗಿನ ಬಿಲ್ ಮೊತ್ತಕ್ಕೆ ವಿನಾಯಿತಿ ನೀಡುತ್ತಿರುವುದು ಉತ್ತಮವಾಗಿದ್ದರೂ, 40 ಯೂನಿಟ್‌ಗಳಿಗಿಂತ ಅಧಿಕ ಬಿಲ್ ಬಂದಾಗ ವಿನಾಯಿತಿ ನೀಡಬೇಕಾದ 40 ಯೂನಿಟ್‌ಗಳಿಗೂ ಬಿಲ್ ಸೇರಿಸಿ ವಿತರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |

...2

| | | |
|---|---|---|
| ಇ) | ಈಗಿರುವ 40 ಯೂನಿಟ್ ಮಿತಿಯನ್ನು ಮೀರಿ ಬಳಸಿದಾಗ 40 ಯೂನಿಟ್‌ಗಳವರೆಗಿನ ಬಿಲ್‌ಗೆ ವಿನಾಯಿತಿ ನೀಡಿ 40 ಯೂನಿಟ್‌ಗಳಿಗಿಂತ ಮೀರಿದ ಪ್ರತಿ ಯೂನಿಟ್‌ಗಳಿಗೆ ಮಾತ್ರ ಶುಲ್ಕ ವಿಧಿಸುವ ಪದ್ಧತಿಯನ್ನು ಅಳವಡಿಸಲಾಗುವುದೇ; | ಸರ್ಕಾರದ ನೀತಿಯಂತೆ ಮತ್ತು ಕ.ವಿ.ನಿ. ಆಯೋಗದ ವಿದ್ಯುಚ್ಛಕ್ತಿ ದರಗಳ ಆದೇಶದಂತೆ ಭಾಗ್ಯಜ್ಯೋತಿ / ಕುಟೀರ ಜ್ಯೋತಿ" ಸ್ಥಾಪನೆಗಳಲ್ಲಿ, ಒಂದಕ್ಕಿಂತ ಹೆಚ್ಚು ಪಾಯಿಂಟುಗಳಿದ್ದರೆ ಅಥವಾ ಮಾಸಿಕ ಬಳಕೆಯು 40 ಯೂನಿಟ್‌ಗಳನ್ನು ಮೀರಿದ್ದರೆ, ಅಂತಹ ಸ್ಥಾಪನಗಳಿಗೆ ವಿದ್ಯುತ್ ದರ ಅನುಸೂಚಿ LT-2(a) ಪ್ರಕಾರ ಬಿಲ್ ಮಾಡಲಾಗುತ್ತಿದೆ.<br><br>ಪ್ರಸ್ತುತ ಸರ್ಕಾರದ ಮುಂದೆ 40 ಯೂನಿಟ್ ಮಿತಿಯನ್ನು ಮೀರಿ ಬಳಸುವ ಹೆಚ್ಚಿನ ಪ್ರತಿ ಯೂನಿಟ್‌ಗಳಿಗೆ ಮಾತ್ರ ಶುಲ್ಕ ವಿಧಿಸಿ ವಸೂಲಿ ಮಾಡುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಈ) | 40 ಯೂನಿಟ್‌ಗಳಿಗಿಂತ ಹೆಚ್ಚಿನ ಬಳಕೆಗೆ ಮಾತ್ರ ಶುಲ್ಕ ವಿಧಿಸಿ ವಸೂಲಿ ಮಾಡುವುದರಿಂದ ಬಳಕೆದಾರರಲ್ಲಿ ಶುಲ್ಕ ಪಾವತಿಯ ಗುಣಗಳನ್ನು ಉತ್ತೇಜಿಸಲು ಸರ್ಕಾರವು ಕ್ರಮ ಕೈಗೊಳ್ಳುವುದೇ; | |
| ಉ) | ಪ್ರಸ್ತುತ ಪ್ರತಿಯೊಂದು ಮನೆಯಲ್ಲಿಯೂ ಕನಿಷ್ಠ 2-3 ವಿದ್ಯುತ್ ದೀಪಗಳು ಅನಿವಾರ್ಯವಾಗಿರುವುದರಿಂದ ಈಗಿರುವ 40 ಯೂನಿಟ್‌ಗಳ ಮಿತಿ ಮೀರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಭಾಗ್ಯಜ್ಯೋತಿ / ಕುಟೀರ ಜ್ಯೋತಿ ಸ್ಥಾವರಗಳಲ್ಲಿ ಮಾಸಿಕ 40 ಯೂನಿಟ್‌ಗಳನ್ನು ಮೀರಿದ ಬಳಕೆಯ ಸ್ಥಾವರಗಳಿಗೆ ಕ.ವಿ.ನಿ ಆಯೋಗದ ದರ ಪರಿಷ್ಕರಣೆ ಆದೇಶದಂತೆ LT 2 (a) ಜಕಾತಿಯಡಿಯಲ್ಲಿ ಬಿಲ್ಲು ಮಾಡಲಾಗುತ್ತಿರುವುದು ವಿಸಕಂಗಳು ಸರ್ಕಾರಕ್ಕೆ ಒದಗಿಸುತ್ತಿರುವ ಮಾಸಿಕ ಮಾಹಿತಿಗಳನ್ವಯ ಸರ್ಕಾರದ ಗಮನಕ್ಕೆ ತಿಳಿದು ಬಂದಿರುತ್ತದೆ. |
| ಊ) | ಬಂದಿದ್ದಲ್ಲಿ, ಅವೈಜ್ಞಾನಿಕವಾದ ಈ ಮಿತಿಯನ್ನು ಹೆಚ್ಚಳ ಮಾಡಿ ಮರು ನಿಗದಿ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವ ಕಾಲಮಿತಿಯೊಳಗೆ ವಿದ್ಯುತ್ ಬಿಲ್ ಸಬ್ಸಿಡಿ ಹೆಚ್ಚಳ ಮಾಡಲಾಗುವುದು; | ಪ್ರಸ್ತುತ ಸರ್ಕಾರದ ಮುಂದೆ ಭಾಗ್ಯಜ್ಯೋತಿ / ಕುಟೀರ ಜ್ಯೋತಿ ಸ್ಥಾವರಗಳಿಗೆ ಮಾಸಿಕ ನಿಗದಿಪಡಿಸಿರುವ 40 ಯೂನಿಟ್‌ಗಳ ಮಿತಿಯನ್ನು ಮರು ನಿಗದಿಪಡಿಸುವ ಹಾಗೂ ಈ ಸಂಬಂದ ವಿದ್ಯುತ್ ಬಿಲ್ ಸಬ್ಸಿಡಿ ನೀಡುವ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಋ) | ಕನಿಷ್ಠ ಬಿಲ್ ಮೊತ್ತವನ್ನು ಕಟ್ಟಲಾಗದ ಕುಟುಂಬಗಳಿಗೆ ಸೌರ ವಿದ್ಯುತ್ ಅಳವಡಿಸಿಕೊಳ್ಳಲು ಹಾಗೂ ಆ ಮೂಲಕ ಇಂಧನ ಸ್ವಾವಲಂಬಿ ಕುಟುಂಬಗಳನ್ನಾಗಿಸಲು ಸರ್ಕಾರ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ? | ಪ್ರಸ್ತುತ, ಕನಿಷ್ಠ ಬಿಲ್ ಕಟ್ಟಲಾಗದ ಕುಟುಂಬಗಳಿಗೆ ಸೌರ ವಿದ್ಯುತ್ ಅಳವಡಿಸಿ, ವಿದ್ಯುತ್ ಸ್ವಾವಲಂಬಿಗಳಾಗಿ ಮಾಡುವ ಯಾವುದೇ ಯೋಜನೆಯು ಸರ್ಕಾರದ ಮುಂದೆ ಇರುವುದಿಲ್ಲ. |

**ಸಂಖ್ಯೆ:** ಎನರ್ಜಿ 17 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 20 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

162
415
10/03/2

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ **ಶ್ರೀ ಸೋಮಲಿಂಗಪ್ಪ ಎಂ.ಎಸ್ (ಸಿರಗುಪ್ಪ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1037** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ **ಸೋಮಲಿಂಗಪ್ಪ ಎಂ.ಎಸ್ (ಸಿರಗುಪ್ಪ)** ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1037** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagei
(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದಪ್ರಶ್ನೆ ಸಂಖ್ಯೆ : 1037

ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ. ಎಸ್ (ಸಿರಗುಪ್ಪ)

ಉತ್ತರಿಸಬೇಕಾದ ದಿನಾಂಕ : 10-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರ ಸರ್ಕಾರದ ಸೌಭಾಗ್ಯ ಯೋಜನೆಯನ್ನು ರಾಜ್ಯದಲ್ಲಿ ಜಾರಿಗೊಳಿಸಲಾಗಿದೆಯೇ; | ಕೇಂದ್ರ ಸರ್ಕಾರದ ಸೌಭಾಗ್ಯ ಯೋಜನೆಯನ್ನು ರಾಜ್ಯದಲ್ಲಿ 2018-19ನೇ ಸಾಲಿನಿಂದ ಜಾರಿಗೊಳಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಈ ಯೋಜನೆಯಡಿಯಲ್ಲಿ ಸಿರುಗುಪ್ಪ ವಿಧಾನಸಭಾ ಕ್ಷೇತ್ರದಲ್ಲಿ ಎಷ್ಟು ಜನರಿಗೆ ವಿದ್ಯುತ್ ಸಂಪರ್ಕ ಒದಗಿಸಲಾಗಿದೆ; | ಈ ಯೋಜನೆಯಡಿಯಲ್ಲಿ ಸಿರುಗುಪ್ಪ ವಿಧಾನಸಭಾ ಕ್ಷೇತ್ರದಲ್ಲಿ 2651 ಸಂಖ್ಯೆಯ ಮನೆಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದೆ. |
| ಇ) | ಬಳ್ಳಾರಿ ಜಿಲ್ಲೆಯಲ್ಲಿ ಈ ಯೋಜನೆಯನ್ನು ಜಾರಿಗೊಳಿಸಲಾಗಿದ್ದಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಗೆ ನಿಗದಿಪಡಿಸಿದ ಅನುದಾನವೆಷ್ಟು? | ಸೌಭಾಗ್ಯ ಯೋಜನೆಯಡಿಯಲ್ಲಿ ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳಿಗೆ ಒಟ್ಟು ರೂ. 1028.47 ಲಕ್ಷಗಳ ಅನುದಾನವನ್ನು ನಿಗದಿಪಡಿಸಲಾಗಿದ್ದು, ತಾಲ್ಲೂಕುವಾರು ವಿವರಗಳು ಕೆಳಗಿನಂತಿವೆ. |

| ಕ್ರ. ಸಂ | ತಾಲೂಕು | ರೂ. ಲಕ್ಷಗಳಲ್ಲಿ |
|---|---|---|
| 1 | ಬಳ್ಳಾರಿ | 269.07 |
| 2 | ಸಿರುಗುಪ್ಪ | 120.84 |
| 3 | ಸಂಡೂರು | 67.11 |
| 4 | ಕೂಡ್ಲಗಿ | 119.54 |
| 5 | ಹೊಸಪೇಟೆ | 152.17 |
| 6 | ಹಗರಿಬೊಮ್ಮನ ಹಳ್ಳಿ | 107.78 |
| 7 | ಹಡಗಲಿ | 191.96 |
| | ಒಟ್ಟು | 1028.47 |

ಷರಾ: ಹರಪ್ಪನಹಳ್ಳಿ ತಾಲ್ಲೂಕು ಇತ್ತೀಚೆಗೆ ಬಳ್ಳಾರಿ ಜಿಲ್ಲೆಗೆ ಸೇರ್ಪಡೆಗೊಂಡಿದ್ದು, ಪ್ರಸ್ತುತ ಬೆಸ್ಕಾಂ ವ್ಯಾಪ್ತಿಯಲ್ಲಿರುತ್ತದೆ. ಬೆಸ್ಕಾಂ ವ್ಯಾಪ್ತಿಯಲ್ಲಿ ಸೌಭಾಗ್ಯ ಯೋಜನೆಯನ್ನು ಕೈಗೊಂಡಿರುವುದಿಲ್ಲ.

ಸಂಖ್ಯೆ:ಎನರ್ಜಿ20ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಇಎನ್ 10 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:09.03.2020

187
YS
10/03/2020

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಿಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **365** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಿಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **365** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 365

ಸದಸ್ಯರ ಹೆಸರು : ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)

ಉತ್ತರಿಸಬೇಕಾದ ದಿನಾಂಕ : 10-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| ಪ್ರಶ್ನೆ | | ಉತ್ತರ |
|---|---|---|
| ಅ) | ಮೂಡಬಿದಿರೆ ಕ್ಷೇತ್ರ ವ್ಯಾಪ್ತಿಯಲ್ಲಿ ಸುಗಮ ವಿದ್ಯುತ್ ಪೂರೈಕೆ ಮತ್ತು ನಿರ್ವಹಣೆಗಾಗಿ ಅವಶ್ಯಕವಾಗಿರುವ ಸಬ್ ಸ್ಟೇಷನ್‌ಗಳ ಸಂಖ್ಯೆ ಮತ್ತು ಈಗ ಇರುವ ಸಬ್‌ಸ್ಟೇಷನ್‌ಗಳ ಸಂಖ್ಯಾ ವಿವರಗಳು ಹಾಗೂ ಅಗತ್ಯವಿರುವ ಸಬ್‌ಸ್ಟೇಷನ್‌ಗಳನ್ನು ಸ್ಥಾಪಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | ಪ್ರಸ್ತುತ ಮಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ವ್ಯಾಪ್ತಿಯ ಮೂಡಬಿದ್ರೆ ಕ್ಷೇತ್ರ ವ್ಯಾಪ್ತಿಯಲ್ಲಿ ಹಾಲಿ ಈ ಕೆಳಕಂಡ 3 ಸಂಖ್ಯೆಯ ವಿದ್ಯುತ್ ವಿತರಣಾ ಉಪಕೇಂದ್ರಗಳಿಂದ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br>1. 110/11 ಕೆವಿ, 2*20 ಎಂವಿಎ ಮೂಡಬಿದ್ರೆ ವಿದ್ಯುತ್ ಉಪಕೇಂದ್ರ.<br>2. 33/11 ಕೆವಿ, 2*5 ಎಂವಿಎ ಮುಲ್ಕಿ ವಿದ್ಯುತ್ ಉಪಕೇಂದ್ರ.<br>3. 220/110/11 ಕೆವಿ, 2*100 ಎಂವಿಎ ಎಂ.ಎಸ್.ಇ.ಝೆಡ್ ವಿದ್ಯುತ್ ಉಪಕೇಂದ್ರ. |
| ಆ) | ನಗರ ಮತ್ತು ಗ್ರಾಮಾಂತರದ ಬಳಕೆದಾರರಿಗೆ ಸುವ್ಯವಸ್ಥಿತ ಮತ್ತು ಸಕಾಲಿಕ ವಿದ್ಯುತ್ ಪೂರೈಕೆಗಾಗಿ ಹಮ್ಮಿಕೊಂಡ ಕ್ರಮಗಳೇನು; | ಮೂಡಬಿದ್ರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ನಗರ ಹಾಗೂ ಗ್ರಾಮಾಂತರ ಬಳಕೆದಾರರಿಗೆ ಹೆಚ್ಚಿನ ಸುವ್ಯವಸ್ಥಿತ ವಿದ್ಯುತ್ ಸರಬರಾಜಿಗಾಗಿ ಈ ಕೆಳಗಿನ ಹೊಸ ವಿದ್ಯುತ್ ವಿತರಣಾ ಉಪ ಕೇಂದ್ರಗಳ ಸ್ಥಾಪನೆಗೆ ಕ್ರಮ ಕೈಗೊಳ್ಳಲಾಗಿದೆ.<br>1. **ಮೂಡಬಿದ್ರೆ ಶಾಖಾ ವ್ಯಾಪ್ತಿಯಲ್ಲಿ 1 ಸಂಖ್ಯೆಯ 33/11 ಕೆವಿ, 2*8** ಎಂವಿಎ ಶಿರ್ತಾಡಿ ವಿದ್ಯುತ್ ವಿತರಣಾ ಉಪಕೇಂದ್ರ ಸ್ಥಾಪನೆ (ತಾಂತ್ರಿಕ ಸಲಹಾ ಸಮಿತಿಯ ಅನುಮೋದನೆ ನೀಡುವ ಪ್ರಕ್ರಿಯೆ ಪ್ರಗತಿಯಲ್ಲಿದೆ)<br>2. **ಕಿನ್ನಿಗೋಳಿ ಶಾಖಾ ವ್ಯಾಪ್ತಿಯಲ್ಲಿ 1 ಸಂಖ್ಯೆಯ 33/11 ಕೆವಿ, 1*8** ಎಂವಿಎ ಯಳತ್ತೂರು ವಿದ್ಯುತ್ ವಿತರಣಾ ಉಪಕೇಂದ್ರವನ್ನು ಸ್ಥಾಪನೆ (ತಾಂತ್ರಿಕ ಸಲಹಾ ಸಮಿತಿಯ ಅನುಮೋದನೆ ನೀಡುವ ಪ್ರಕ್ರಿಯೆ ಪ್ರಗತಿಯಲ್ಲಿದೆ)<br>3. **33/11** ಕೆವಿ, ಮುಲ್ಕಿ ವಿದ್ಯುತ್ ವಿತರಣಾ ಉಪಕೇಂದ್ರವನ್ನು **110/11** ಕೆವಿ ವಿದ್ಯುತ್ ವಿತರಣಾ ಉಪಕೇಂದ್ರವನ್ನಾಗಿ ಉನ್ನತೀಕರಿಸುವ ಕಾಮಗಾರಿಯು ಕವಿಪ್ರನಿನಿ ವತಿಯಿಂದ ಕೈಗೊಳ್ಳಲಾಗಿದ್ದು ಸದರಿ ಕಾಮಗಾರಿಯು ಮುಕ್ತಾಯ ಹಂತದಲ್ಲಿರುತ್ತದೆ. |

| | | |
|---|---|---|
| ಇ) | ಸೋಲಾರ್ ವಿದ್ಯುತ್ ಉತ್ಪಾದನೆಯನ್ನು ಗ್ರಾಮೀಣ ಭಾಗಗಳಲ್ಲಿ ಕೈಗೊಳ್ಳುವ ನಿಟ್ಟಿನಲ್ಲಿ ಇಂಧನ ಇಲಾಖೆಯ ಪ್ರೋತ್ಸಾಹ ಕ್ರಮಗಳು ಯಾವುವು? | ಸೌರ ವಿದ್ಯುತ್ ಘಟಕಗಳನ್ನು ರಾಜ್ಯದ ಯಾವ ಭಾಗದಲ್ಲಿಯಾದರೂ ಹೆಚ್ಚು ಸೌರ ವಿಕಿರಣ ಲಭ್ಯವಿರುವ ಕಡೆಗಳಲ್ಲಿ ಅನುಷ್ಠಾನಗೊಳಿಸಬಹುದಾಗಿದೆ.<br>ಸೌರ ನೀತಿ 2014–21 ರನ್ವಯ ಪ್ರಕಾರ ಗ್ರಿಡ್ ಸಂಪರ್ಕಿತ ಹೆಚ್ಚಿನ (ಮೆಗಾವ್ಯಾಟ್) ಸಾಮರ್ಥ್ಯದ ಯೋಜನೆಗಳಿಗೆ ಲಭ್ಯವಿರುವ ಪ್ರೋತ್ಸಾಹಕ ಕ್ರಮಗಳು ಈ ಕೆಳಕಂಡಂತಿವೆ:<br>• ಕರ್ನಾಟಕ ಕೈಗಾರಿಕಾ ನೀತಿಯಡಿಯಲ್ಲಿ ಸಿಗುವ ಎಲ್ಲಾ ವಿನಾಯಿತಿಗಳನ್ನು ಸೌರ ಯೋಜನೆ ಅಭಿವೃದ್ಧಿದಾರರು ಪಡೆಯಲು ಅವಕಾಶವಿದೆ.<br>• ಸೌರ ಯೋಜನೆಗಳಿಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ/ವಿದ್ಯುತ್ ಸರಬರಾಜು ಕಂಪನಿಗಳಿಗೆ ಪಾವತಿಸಬೇಕಾಗಿದ್ದ ಮೇಲ್ವಿಚಾರಣಾ ಶುಲ್ಕವನ್ನು 5% ಗೆ ಇಳಿಸಲಾಗಿದೆ.<br>• ಸೌರ ಯೋಜನೆಗಳನ್ನು ಅನುಷ್ಠಾನಗೊಳಿಸಲು ಭೂ ಸುಧಾರಣೆ ಕಾಯ್ದೆಯನ್ನು ಸರಳೀಕರಣಗೊಳಿಸಿ ಪರಿಭಾವಿತ ಭೂ ಪರಿವರ್ತನೆ ಸೌಲಭ್ಯವನ್ನು ಒದಗಿಸಲಾಗಿದ್ದು, ಸೌರ ಯೋಜನೆಗಳ ಅನುಷ್ಠಾನಕ್ಕೆ ಜಮೀನಿನ ಭೂ ಪರಿವರ್ತನೆಗೆ ಸಂಬಂಧಪಟ್ಟ ಶುಲ್ಕಗಳನ್ನು ಪಾವತಿಸಿದಲ್ಲಿ ಯೋಜನಾ ಅನುಷ್ಠಾನ ಕಾರ್ಯವನ್ನು ಕೈಗೆತ್ತಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br>• ಸೌರ ಯೋಜನೆಗಳ ಅನುಷ್ಠಾನಕ್ಕೆ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆಯುವುದರಿಂದ ವಿನಾಯಿತಿ ನೀಡಲಾಗಿದೆ.<br>ಕೇಂದ್ರ ಸರ್ಕಾರದಿಂದ ಗ್ರಿಡ್ ಸಂಪರ್ಕಿತ ಸೌರ ಯೋಜನೆಗಳಿಗೆ Cust oms ಸುಂಕ ವಿನಾಯಿತಿಯನ್ನು ನಿಯಮಗಳ ಪ್ರಕಾರ ಒದಗಿಸಲಾಗುವುದು.<br>**ಸೌರ ಮೇಲ್ಛಾವಣಿ:**<br>• ಸೌರ ಮೇಲ್ಛಾವಣಿ ಘಟಕ ಅಳವಡಿಸಿ ಸೋಲಾರ್ ವಿದ್ಯುತ್ ಉತ್ಪಾದನೆಯನ್ನು ಪ್ರೋತ್ಸಾಹಿಸಲು ವಿದ್ಯುತ್ ಸರಬರಾಜು ಕಂಪನಿಗಳು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತವೆ.<br>○ ಸೌರ ಶಕ್ತಿ ಮೇಲ್ಛಾವಣಿ ಪಿವಿ ವ್ಯವಸ್ಥೆಗೆ ಸಂಬಂಧಿಸಿದ ಗ್ರಾಹಕರ/ಬೆವಿಕಂ ಅಧಿಕಾರಿಗಳ ಕೈಪಿಡಿ, ಸರ್ಕಾರದ ಅಧಿಕೃತ ಜ್ಞಾಪನಾ ಪತ್ರಗಳು ಹಾಗೂ ಸುತ್ತೋಲೆಗಳನ್ನು ಬೆವಿಕಂನ ಅಂತರ್ಜಾಲದಲ್ಲಿ ಹಾಗೂ ಆನ್ ಲೈನ್ ಮೂಲಕವೇ ಅರ್ಜಿಗಳು ಹಾಗೂ ನೋಂದಣಿ ಶುಲ್ಕ ಪಾವತಿಸಲು ಸಾಫ್ಟ್ ವೇರ್ ಸಿದ್ಧಪಡಿಲಾಗಿರುತ್ತದೆ. |

| | | |
|---|---|---|
| | | ○ ವಾರ್ತಾ ಪತ್ರಿಕೆ, ನಿಯತ ಕಾಲಿಕೆಗಳು, ಸ್ಮರಣ ಸಂಚಿಕೆ ಇತ್ಯಾದಿಗಳಲ್ಲಿ ಜಾಹೀರಾತು ನೀಡುವುದು.<br>○ ಫಲಕಗಳು ಮತ್ತು ಬಸ್ ತಂಗುದಾಣಗಳ ಮೇಲೆ ಜಾಹೀರಾತನ್ನು ನೀಡುವುದರ ಮುಖಾಂತರ ದೂರದರ್ಶನ, ಆಕಾಶವಾಣಿ, ಬಿಗ್ ಎಫ್.ಎಂ.ಗಳಲ್ಲಿ ಆವರ್ತನಗಳು.<br>○ ಭಿತ್ತಿ ಪತ್ರಗಳು, ಕರಪತ್ರಗಳು, ಕೈಪಿಡಿಗಳ ಮೂಲಕ ಜಾಹೀರಾತನ್ನು ನೀಡುವುದರ ಮುಖಾಂತರ.<br>• ಸೌರ ಶಕ್ತಿ ಘಟಕದ ಸಾಮರ್ಥ್ಯವನ್ನು ವಿದ್ಯುತ್ ಮಂಜೂರಾತಿ (Sanctioned Load) ಹೊರೆಯ ಸಾಮರ್ಥ್ಯದ ಮಿತಿ ಮೀರದೆ, ಗರಿಷ್ಠ 2 ಮೆ.ವ್ಯಾ. ಸಾಮರ್ಥ್ಯದವರೆಗೆ ಸೌರ ಮೇಲ್ಛಾವಣಿ ಘಟಕಗಳನ್ನು ಅನುಷ್ಠಾನಗೊಳಿಸಬಹುದಾಗಿದೆ.<br>• ಗೃಹಬಳಕೆ, ಹಾಸ್ಪಿಟಲ್ಸ್ ಮತ್ತು ಶೈಕ್ಷಣಿಕ ಸಂಸ್ಥೆಗಳಿಗೆ Gross metering ಅಥವಾ Net metering ಆಯ್ಕೆ ಮಾಡಿಕೊಳ್ಳುವ ಅವಕಾಶವಿದ್ದು, ಇತರೆ ಉಳಿದ ಸ್ಥಾವರಗಳಿಗೆ Net metering ಮಾತ್ರ ಅಳವಡಿಸಿಕೊಳ್ಳುವ ಅವಕಾಶವಿರುತ್ತದೆ.<br>• ಕಟ್ಟಡದ ಮೇಲ್ಛಾವಣಿ ಮೇಲೆ ಸೌರಶಕ್ತಿ ಉತ್ಪಾದನಾ ಘಟಕ ಅಳವಡಿಸಲು ರಾಜ್ಯ ಸರ್ಕಾರದಿಂದ ಯಾವುದೇ ಸಹಾಯಧನ ಇರುವುದಿಲ್ಲ. ಆದರೆ ಕೇಂದ್ರ ಸರ್ಕಾರದಿಂದ ಆಯವ್ಯಯಕ್ಕನುಸಾರವಾಗಿ ಸಹಾಯಧನವನ್ನು ನೀಡಲಾಗುತ್ತದೆ. ಇದಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ನೋಡಲ್ ಏಜೆನ್ಸಿಯಾಗಿರುತ್ತದೆ.<br>• ಸೌರ ಘಟಕಗಳಿಂದ ಉತ್ಪಾದನೆಯಾದ ವಿದ್ಯುತ್ ನ್ನು ಕೆ.ಇ.ಆರ್.ಸಿ ರವರ ಮಾನದಂಡಗಳು, ನಿಯಮಾವಳಿಗಳು ಹಾಗೂ ನಿಗಧಿಪಡಿಸಿರುವ ದರದಂತೆ ವಿದ್ಯುತ್ ವಿತರಣಾ ಕಂಪನಿಗಳಿಂದ ಖರೀದಿಸಲಾಗುತ್ತಿದೆ.<br>**<u>ಜಾಲಮುಕ್ತ ಸೌರ ನೀರಾವರಿ ಪಂಪ್‌ಸೆಟ್ ಯೋಜನೆ:</u>**<br>ರಾಜ್ಯ ಸರ್ಕಾರದ ರೂ. 66.8 ಕೋಟಿ ಸಹಾಯಧನದೊಂದಿಗೆ ಜಾಲಮುಕ್ತ ಸೌರ ನೀರಾವರಿ ಪಂಪ್‌ಸೆಟ್ ಯೋಜನೆಯನ್ನು ರಾಜ್ಯದಲ್ಲಿ ನಾಲ್ಕು ಹಂತಗಳಲ್ಲಿ ಒಟ್ಟು 3710 ಸಂಖ್ಯೆಯ ಜಾಲಮುಕ್ತ ಸೌರ ನೀರಾವರಿ ಪಂಪ್‌ಸೆಟ್‌ಗಳನ್ನು ಅಳವಡಿಸಿ, ಚಾಲನೆಗೊಳಿಸಲಾಗಿದೆ. |

| | | |
|---|---|---|
| | | ಮುಂದುವರೆದು, ಕೇಂದ್ರ ಸರ್ಕಾರದ Pradhan Mantri Kisan Urja Suraksha Evam Uttan Mahabhiyan (PM-KUSUM) ಯೋಜನೆಯ Component B ಯಡಿ 6000 ಸಂಖ್ಯೆಯ ಜಾಲಮುಕ್ತ ಸೌರ ನೀರಾವರಿ ಪಂಪ್‌ಸೆಟ್ ಗಳನ್ನು ಅನುಷ್ಠಾನಗೊಳಿಸಲು ಕ್ರಮ ವಹಿಸಲಾಗುತ್ತಿದೆ.<br><br>**ಸೂರ್ಯ ರೈತ ಯೋಜನೆ:**<br><br>ನೆಟ್ ಮೀಟರಿಂಗ್ ವ್ಯವಸ್ಥೆಯಡಿ, ಗ್ರಿಡ್ ಸಂಪರ್ಕಿತ ಸೌರ ವಿದ್ಯುತ್ ಚಾಲಿತ ಪಂಪ್‌ಸೆಟ್ – "ಸೂರ್ಯ ರೈತ ಯೋಜನೆ" ಗೆ ದಿನಾಂಕ:20.09.2014ರಂದು ಮಾರ್ಗಸೂಚಿಗಳನ್ನು ಹೊರಡಿಸಿದ್ದು, ಬೆಸ್ಕಾಂ ವ್ಯಾಪ್ತಿಯ ಹಾರೋಬೆಲೆ ಗ್ರಾಮದಲ್ಲಿ ಪ್ರಾಯೋಗಿಕವಾಗಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಸದರಿ ಯೋಜನೆಯಡಿ ರೈತರು ಗ್ರಿಡ್ ಸಂಪರ್ಕಿತ ಸೌರ ಚಾಲಿತ ಪಂಪ್‌ಸೆಟ್‌ನಿಂದ ಉತ್ಪಾದನೆಯಾಗುವ ವಿದ್ಯುತ್ತನ್ನು ಸ್ವಂತ ಬಳಕೆಗೆ ಉಪಯೋಗಿಸಿಕೊಂಡು ಉಳಿದ ಹೆಚ್ಚುವರಿ ವಿದ್ಯುತ್ತನ್ನು ವಿದ್ಯುತ್ ಸರಬರಾಜು ಕಂಪನಿಗಳ ಗ್ರಿಡ್‌ಗೆ ನಿವ್ವಳ ಮಾಪನ ವ್ಯವಸ್ಥೆಯಡಿ ಸರಬರಾಜು ಮಾಡಬಹುದಾಗಿರುತ್ತದೆ. |

ಸಂಖ್ಯೆ: ಎನರ್ಜಿ 10 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 23 ಎಸ್‌ಎಸ್‌ಸಿ 2020 ದಿನಾಂಕ: 09.03.2020.

1114
U/S
10/03/2020

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1114ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1114ಕ್ಕೆ ದಿನಾಂಕ: 10.03.2020 ರಂದು ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು, ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 100 ಪ್ರತಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

9/3/2020
**(ಸುಮತಿ ಎಸ್.)**
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 23 ಎಸ್‌ಎಸ್‌ಸಿ 2020 ದಿನಾಂಕ: 09.03.2020.

1114

u/s
10/03/2020

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1114ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ. (ಉಡುಪಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1114ಕ್ಕೆ ದಿನಾಂಕ: 10.03.2020 ರಂದು ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು, ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 100 ಪ್ರತಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

9/3/2020
**(ಸುಮತಿ ಎಸ್.)**
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1114
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ. (ಉಡುಪಿ)
ಉತ್ತರಿಸುವವರು : ಮುಖ್ಯಮಂತ್ರಿಗಳು
ಉತ್ತರಿಸಬೇಕಾದ ದಿನಾಂಕ : 10-03-2020

| ಪ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಕೈಗೊಂಡ ಕ್ರಮಗಳೇನು; | ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳನ್ನು ಉತ್ತೇಜಿಸಲು ಈ ಕೆಳಗಿನ ಕಾರ್ಯಕ್ರಮಗಳನ್ನು / ಯೋಜನೆಗಳನ್ನು ಜಾರಿಗೆ ತರಲಾಗಿದೆ.<br><br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಟ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಟ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.<br><br>3. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 10ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br><br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 50 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಶೇ 90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಟ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>6. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಟ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿ ರಹಿತ ಗರಿಷ್ಟ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.<br><br>7. ದಿನಾಂಕ:01-04-2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ |

| ಪ್ರಸಂ. | ಪ್ರಶ್ನೆ | ಉತ್ತರ |
|---|---|---|
| | | ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರ ಶುಲ್ಕಗಳನ್ನು ಭರಿಸಲಾಗುತ್ತಿದೆ.<br><br>8. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಿಗಳು ದಿನಾಂಕ: 01-04-2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಗಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ.<br><br>9. ಕನಾಟಕ ರಾಜ್ಯ ಕೈಗಾರಿಕಾ ನೀತಿ 2014-19ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.<br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>2. ಬಂಡವಾಳ ಹೂಡಿಕೆ ಸಹಾಯಧನ<br>3. ಬಡ್ಡಿ ಸಹಾಯಧನ<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>5. ಪ್ರವೇಶ ತೆರಿಗೆ ವಿನಾಯಿತಿ.<br>6 ರಫ್ತು ಆದಾರಿತ ಘಟಕಗಳಿಗೆ ರಿಯಾಯಿತಿ.<br>7. ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯಿತಿ.<br>8. ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ.<br>9. ವಿದ್ಯುತ್ ತೆರಿಗೆ ವಿನಾಯಿತಿ<br>10. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಮತ್ತು ಪೇಟೆಂಟ್ ನೋಂದಣಿ ಸಹಾಯಧನ<br>11. ಮಳೆ ನೀರು ಕೊಯ್ಲು / ಸಂರಕ್ಷಣೆ ಸಹಾಯಧನ<br>12. ಶಕ್ತಿ ಸಂರಕ್ಷಣೆ ಸಹಾಯಧನ<br>13. ಯೋಜನಾ ವರದಿ ವೆಚ್ಚ ಮರುಪಾವತಿ |
| ಆ) | ಉದ್ಯೋಗ ಸೃಷ್ಟಿಸುವುದಕ್ಕಾಗಿ ಯಾವ ಜಿಲ್ಲೆಗಳಲ್ಲಿ ಹೊಸದಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಯೋಜನೆ ರೂಪಿಸಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಉದ್ಯೋಗ ಸೃಷ್ಟಿಸುವುದಕ್ಕಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಹೊಸದಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಮೇಲೆ ತಿಳಿಸಲಾದ ಯೋಜನೆಗಳನ್ನು ರೂಪಿಸಲಾಗಿದೆ. |
| ಇ) | ಹೊಸದಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಪ್ರಶ್ನೆಯ (ಅ) ಭಾಗದಲ್ಲಿ ಈಗಾಗಲೇ ಉತ್ತರಿಸಲಾಗಿದೆ. |

**ಸಿಐ 23 ಸಪ್ರಕೈ 2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ



ಕರ್ನಾಟಕ ಸರ್ಕಾರ

ಸಂಖ್ಯೆ: ಆಇ 96 ಎಫ್‌ಸಿ -1 / 2020

ಕರ್ನಾಟಕ ಸರ್ಕಾರ ಸಚಿವಾಲಯ,
ವಿಧಾನಸೌಧ,
ಬೆಂಗಳೂರು. ದಿನಾಂಕ:04-03-2020

35
U/S
10/03/2020

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ, ವಿಧಾನಸೌಧ,
ಬೆಂಗಳೂರು

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ, ವಿಧಾನಸೌಧ,
ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1079ಕ್ಕೆ ಉತ್ತರಿಸುವ ಬಗ್ಗೆ

* * * * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ ಸದಸ್ಯರಾದ ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1079ಕ್ಕೆ ಕನ್ನಡ ಭಾಷೆಯ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ವಿಶ್ವಾಸಿ,

(ಕೆ.ಗಾಯಿತ್ರಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಲೋ.ಆ.ಕೋ)

# ಕರ್ನಾಟಕ ವಿಧಾನ ಸಭೆ

12

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 1079
2. ಸದಸ್ಯರ ಹೆಸರು ಶ್ರೀ.ಬಂಡೆಪ್ಪ ಖಾಶೆಂಪುರ್ (ಬೀದರ್ – ದಕ್ಷಿಣ)
3. ಉತ್ತರಿಸಬೇಕಾದ ದಿನಾಂಕ 10–03–2020
4. ಉತ್ತರಿಸುವ ಸಚಿವರು ಮಾನ್ಯ ಮುಖ್ಯಮಂತ್ರಿಯವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ದಿನಾಂಕ 05/08/2019 ರಿಂದೀಚೆಗೆ ಆರ್ಥಿಕ ಇಲಾಖೆಯಿಂದ ವಿವಿಧ ನೀರಾವರಿ ನಿಗಮಗಳಿಗೆ ಮತ್ತು ಯೋಜನೆಗಳಿಗೆ ಮಾಹೆಯಾನ ಎಷ್ಟು ಹಣ ಭರವಸೆ ಪತ್ರಗಳನ್ನು ಬಿಡುಗಡೆ ಮಾಡಲಾಗಿದೆ (ನಿಗಮವಾರು ಮತ್ತು ಯೋಜನೆವಾರು ಸಂಪೂರ್ಣ ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯಿಂದ ನೀರಾವರಿ ನಿಗಮಗಳಿಗೆ ಹಣ ಭರವಸೆ ಪತ್ರಗಳನ್ನು ಬಿಡುಗಡೆ ಮಾಡುವುದನ್ನು ದಿನಾಂಕ 01–01–2008 ರಿಂದ ಸರ್ಕಾರದ ಆದೇಶ ಸಂಖ್ಯೆ FD 03 SOFC 2007ರ ಅನುಸಾರ ಕೈಬಿಡಲಾಗಿರುತ್ತದೆ. ಪ್ರಸಕ್ತ ಆಯವ್ಯಯದಲ್ಲಿ ಒದಗಿಸಲಾದ ಅನುದಾನವನ್ನು ಬಿಡುಗಡೆ ಮಾಡಲು ಜಲ ಸಂಪನ್ಮೂಲ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಯಿಂದ ಕಾಲಕಾಲಕ್ಕೆ ಅಧಿಕಾರ ಪ್ರತ್ಯಾಯೋಜಿಸಲಾಗುತ್ತಿದೆ. |
| ಆ | ಸದರಿ ಅವಧಿಯಿಂದೀಚೆಗೆ ಆರ್ಥಿಕ ಇಲಾಖೆಯಿಂದ ನೀರಾವರಿ ನಿಗಮಗಳಿಗೆ ಮತ್ತು ಯೋಜನೆಗಳಿಗೆ ಮಾಹೆಯಾನ ಬಿಡುಗಡೆಯಾದ ಹಣ ಭರವಸೆ ಪತ್ರಗಳನ್ನು ಗುತ್ತಿಗೆದಾರರಿಗೆ ಹಂಚಿಕೆ ಮಾಡಲು ಆರ್ಥಿಕ ಇಲಾಖೆಯಿಂದ ಹೊರಡಿಸಿರುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ |

ಮುಂದಿನ ಪುಟಕ್ಕೆ...............

| | | |
|---|---|---|
| ಇ | ಮಾನದಂಡಗಳನ್ನು ನಿಗಮದ ವ್ಯವಸ್ಥಾಪಕ ನಿರ್ದೇಶಕರು ಮತ್ತು ಮುಖ್ಯ ಇಂಜಿನಿಯರ್ ಹಾಗೂ ಕಾರ್ಯಪಾಲಕ ಅಭಿಯಂತರರು ಚಾಚೂ ತಪ್ಪದೆ ಅನುಸರಿಸಿದ ಬಗ್ಗೆ ಆರ್ಥಿಕ ಇಲಾಖೆಯು ಪರಿಶೀಲಿಸಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ |
| ಈ | ನಿಗಮದ ವ್ಯವಸ್ಥಾಪಕ ನಿರ್ದೇಶಕರು ಮತ್ತು ಮುಖ್ಯ ಇಂಜಿನಿಯರ್ ಹಾಗೂ ಕಾರ್ಯಪಾಲಕ ಅಭಿಯಂತರರು ಮಾನದಂಡಗಳನ್ನು ಅನುಸರಿಸದೇ ಇದ್ದಲ್ಲಿ ಅಂತಹವರ ವಿರುದ್ಧ ಯಾವ ಕ್ರಮ ಜರುಗಿಸಲಾಗಿದೆ | ಅನ್ವಯಿಸುವುದಿಲ್ಲ |
| ಉ | ನಿಗಮದ ವ್ಯವಸ್ಥಾಪಕ ನಿರ್ದೇಶಕರು ನಿಗಮದ ನಿಯಮಗಳನ್ನು ಉಲ್ಲಂಘಿಸಿ ಹಣ ಭರವಸೆ ಪತ್ರಗಳನ್ನು ವಿತರಿಸಿರುವುದು ಆರ್ಥಿಕ ಇಲಾಖೆಯ ಗಮನಕ್ಕೆ ಬಂದಿದೆಯೇ; ಆರ್ಥಿಕ ಇಲಾಖೆಯಿಂದ/ಸರ್ಕಾರದಿಂದ ಯಾವ ಕ್ರಮ ಜರುಗಿಸಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು. | ಅನ್ವಯಿಸುವುದಿಲ್ಲ |

**ಸಂಖ್ಯೆ: ಎಫ್‌ಡಿ 96 ಎಫ್‌ಸಿ-1 / 2020**

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

**ಕರ್ನಾಟಕ ಸರ್ಕಾರ**

ಸಂಖ್ಯೆ: ಪಿಡಿಎಸ್ 14 ಎಂಡಿಬಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:07.03.2020.

123
GIS
10/03/2020

ಇವರಿಂದ:

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ,
ಬೆಂಗಳೂರು.

ಇವರಿಗೆ:

**ಕಾರ್ಯದರ್ಶಿ(ಪ್ರ),**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಪ್ರಶ್ನೆಗಳ ಶಾಖೆ, ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಗೌಡ.ಟಿ.ಡಿ. (ಶೃಂಗೇರಿ)–ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:825ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ(ಪ್ರ), ಕರ್ನಾಟಕ ವಿಧಾನ ಸಭೆ ಸಚಿವಾಲಯರವರ ಪತ್ರ ದಿನಾಂಕ:29.02.2020.

* * * *

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ರಾಜೇಗೌಡ.ಟಿ.ಡಿ (ಶೃಂಗೇರಿ)–ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:825ಕ್ಕೆ ಉತ್ತರವನ್ನು ಸಿದ್ಧಪಡಿಸಿ ಈ ಪತ್ರಕ್ಕೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

02.03.2020
(ಚಿಕ್ಕಸುಬ್ಬಯ್ಯ)
ನಿರ್ದೇಶಕರು,
ಎಡಿಬಿ ವಿಭಾಗ,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಪ್ರತಿ ಮಾಹಿತಿಗಾಗಿ:**

1) ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಆಪ್ತ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 825 |
| 2 | ಸದಸ್ಯರ ಹೆಸರು | : | ಶ್ರೀ ರಾಜೇಗೌಡ ಟಿ.ಡಿ (ಶೃಂಗೇರಿ) |
| 3 | ಉತ್ತರಿಸುವ ದಿನಾಂಕ | : | 10.03.2020 |
| 4 | ಉತ್ತರಿಸುವ ಸಚಿವರು | : | ಸನ್ಮಾನ್ಯ ಮುಖ್ಯಮಂತ್ರಿಯವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1 | ಕಳೆದ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ ಸರ್ಕಾರದ ವಿವೇಚನಾ ಕೋಟಾದಡಿ ಹೆಚ್ಚುವರಿ ಅನುದಾನ ರೂ.15.00 ಕೋಟಿ ಮಂಜೂರಾಗಿದ್ದು, ಅನುಮೋದನೆಗೊಂಡಿದ್ದ ಕಾಮಗಾರಿಗಳನ್ನು ಬದಲಾವಣೆ ಮಾಡಿ ಶಿಕಾರಿಪುರಕ್ಕೆ ಮಂಜೂರು ಮಾಡಿರಲು ಕಾರಣವೇನು? | 2019-20ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯ ಸರ್ಕಾರದ ವಿವೇಚನಾ ನಿಧಿಯಡಿ ಶೃಂಗೇರಿ ಮತಕ್ಷೇತ್ರದ ಅಭಿವೃದ್ಧಿಗೆ ರೂ.1500.00 ಲಕ್ಷಗಳನ್ನು ಬಂಡವಾಳ ಲೆಕ್ಕ ಶೀರ್ಷಿಕೆಯಡಿ ಬಿಡುಗಡೆ ಮಾಡಲಾಗಿರುತ್ತದೆ.<br><br>ಹೊಸದಾಗಿ ಸರ್ಕಾರ ಅಸ್ತಿತ್ವಕ್ಕೆ ಬಂದ ನಂತರ, ಜುಲೈ 2019ರಲ್ಲಿ ಅನುಮೋದನೆಗೊಂಡಿರುವ ಎಲ್ಲಾ ಹೊಸ ಕಾಮಗಾರಿಗಳನ್ನು ಚಾಲನೆಗೊಳಸದಂತೆ ನಿರ್ದೇಶನ ನೀಡಲಾಗಿರುತ್ತದೆ. ಅದರಂತೆ ಮೇಲ್ಕಂಡ ಅನುದಾನವು ಒಳಗೊಂಡಿರುತ್ತದೆ.<br><br>ನಂತರದಲ್ಲಿ ಜುಲೈ ಹಾಗೂ ಆಗಸ್ಟ್ 2019ರ ಮಾಹೆಯಲ್ಲಿ ರಾಜ್ಯದಲ್ಲಿ ಸುರಿದ ಭಾರಿ ಮಳೆಯಿಂದ ಸಾರ್ವಜನಿಕ ಆಸ್ತಿಗಳು ಹಾನಿಗೊಳಗಾಗಿದ್ದು, ಇವುಗಳ ಪೈಕಿ ಶಾಲಾ ಕಟ್ಟಡಗಳ ಮರು ನಿರ್ಮಾಣ / ದುರಸ್ತಿಗೆ ಮೊದಲ ಆದ್ಯತೆ ನೀಡುವುದು ಅವಶ್ಯವಿದ್ದುದರಿಂದ, ಸದರಿ ಅನುದಾನವನ್ನು ಶಾಲಾ ಕಟ್ಟಡದ ಮರುನಿರ್ಮಾಣ/ದುರಸ್ತಿ ಮತ್ತು ಇತರೆ ಅಭಿವೃದ್ಧಿ ಕಾಮಗಾರಿಗಳಿಗೆ ಮಂಡಳಿ ವ್ಯಾಪ್ತಿಯ ಶೃಂಗೇರಿ ಸೇರಿದಂತೆ, ಶಿಕಾರಿಪುರ, ಸಾಗರ, ಬೈಂದೂರು, ಚನ್ನಗಿರಿ, ಶಿವಮೊಗ್ಗ ಗ್ರಾಮಾಂತರ ಮತ್ತು ತೀರ್ಥಹಳ್ಳಿ ಮತಕ್ಷೇತ್ರಗಳಿಗೆ ಮರುಹಂಚಿಕೆ ಮಾಡಲಾಗಿರುತ್ತದೆ. |
| 2 | ಶಿಕಾರಿಪುರ ವಿಧಾನಸಭಾ ಕ್ಷೇತ್ರದ ಅಭಿವೃದ್ಧಿಗೆ ಬೇರೆ ಬೇರೆ ಯೋಜನೆಯಡಿಯಲ್ಲಿ ಹೆಚ್ಚು ಅನುದಾನಗಳಿದ್ದರೂ ಸಹ ಇದೇ ಹಣವನ್ನು ಬಳಸಿಕೊಳ್ಳಲು ಕಾರಣವೇನು? | ಶಾಲಾ ಕಟ್ಟಡಗಳ ಮರುನಿರ್ಮಾಣಕ್ಕೆ ಅನುದಾನದ ಕೊರತೆ ಇದ್ದುದರಿಂದ, 68 ಶಾಲಾ ಕಟ್ಟಡಗಳ ಮರು ನಿರ್ಮಾಣ ಕಾಮಗಾರಿಗೆ ರೂ.10.26 ಕೋಟಿಗಳನ್ನು ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿ ವ್ಯಾಪ್ತಿಗೆ ಒಳಪಡುವ ಶಿಕಾರಿಪುರ ಮತಕ್ಷೇತ್ರಕ್ಕೂ ಬಳಸಿಕೊಳ್ಳಲಾಗಿರುತ್ತದೆ. |

| | | |
|---|---|---|
| ೩ | ಈ ಹಿಂದೆ ಮಂಜೂರಾಗಿದ್ದ ರೂ.15.00 ಕೋಟಿಗಳ ಕಾಮಗಾರಿಗಳಿಗೆ ಬೇರೆ ಯೋಜನೆ ಅಥವಾ ಮೂಲಗಳಿಂದ ಪರ್ಯಾಯ ವ್ಯವಸ್ಥೆ ಕಲ್ಪಿಸಿ, ಅನುದಾನ ಮಂಜೂರು ಮಾಡಿ ಶೃಂಗೇರಿ ವಿಧಾನಸಭಾ ಕ್ಷೇತ್ರವನ್ನು ಅಭಿವೃದ್ಧಿ ಪಡಿಸಲು ಸರ್ಕಾರ ಕ್ರಮಕೈಗೊಳ್ಳುವುದೇ? | ಶೃಂಗೇರಿ ವಿಧಾನಸಭಾ ಕ್ಷೇತ್ರದ ಅಭಿವೃದ್ಧಿಗಾಗಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯ ಅಧ್ಯಕ್ಷರ ವಿವೇಚನಾ ನಿಧಿಯಡಿ, 2018-19ನೇ ಸಾಲಿನ ವರೆಗೆ ಉಳಿಕೆಯಾದ ಅನುದಾನದಲ್ಲಿ ರೂ. 3.00 ಕೋಟಿ ಹಾಗೂ 2019-20ನೇ ಸಾಲಿನಲ್ಲು ರೂ. 1.50 ಕೋಟಿ ಸೇರಿ ಒಟ್ಟು ರೂ. 4.50 ಕೋಟಿಗಳನ್ನು ನೀಡಲಾಗಿರುತ್ತದೆ.<br><br>ಶೃಂಗೇರಿ ಮತಕ್ಷೇತ್ರದ ಅಭಿವೃದ್ಧಿಗಾಗಿ, ವಿವಿಧ ಇಲಾಖೆಗಳಲ್ಲಿ ಅನುದಾನ ಲಭ್ಯತೆಗನುಗುಣವಾಗಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುತ್ತಿದೆ. |

**ಸಂಖ್ಯೆ: ಪಿಡಿಎಸ್- ಎಂಡಿಬಿ/14/2020**

(ಬಿ. ಎಸ್. ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 05 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.03.2020

ಇವರಿಂದ

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1064ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:1064ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1064
ಸದಸ್ಯರ ಹೆಸರು : ಶ್ರೀ ಶಿವಾನಂದ ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ದಿನಾಂಕ : 10.03.2020
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಕೃಷ್ಣಾ ಭಾಗ್ಯ ಜಲ ನಿಗಮದಿಂದ ವಿಜಯಪುರ ಬೇಗಂ ತಲಾಬ್ (ಕೆರೆ)ನ್ನು ಅಭಿವೃದ್ಧಿ ಪಡಿಸಲಾಗಿದೆಯೇ; | ಹೌದು |
| ಆ) | ಸದರಿ ನಿಗಮದಿಂದ ಯಾವ ವರ್ಷ ಎಷ್ಟು ಅನುದಾನವನ್ನು ಯಾವ ಲೆಕ್ಕಶೀರ್ಷಿಕೆಯಡಿ ಒದಗಿಸಲಾಗಿದೆ; | ಕೃಷ್ಣಾ ಭಾಗ್ಯ ಜಲ ನಿಗಮದ ಬಂಡವಾಳ ವೆಚ್ಚ (ಕ್ಯಾಪಿಟಲ್ ಗ್ರಾಂಟ್) ಅನುದಾನದಲ್ಲಿ ಒದಗಿಸಿದ ವರ್ಷವಾರು ಅನುದಾನದ ವಿವರಗಳು ಈ ಕೆಳಗಿನಂತಿವೆ.<br>ಕ್ರ ಸಂ. / ವರ್ಷವಾರು / ಅನುದಾನ<br>1 / 2018-19 / 676.16<br>2 / 2019-20 / 450.00<br>ಒಟ್ಟು / 1126.16 |
| ಇ) | ಸದರಿ ನಿಗಮದಿಂದ ಕೆರೆಯಲ್ಲಿ ಯಾವ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; | ಬೇಗಂ ತಲಾಬ್ ಕೆರೆ ಅಭಿವೃದ್ಧಿ ಅಡಿ ಪ್ರಮುಖವಾಗಿ ಕೆರೆಯ ಮುಂಭಾಗದ ಆವರಣದಲ್ಲಿ ಜಲಾಭಿಮುಖ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಈ ಕಾಮಗಾರಿಯಡಿಯಲ್ಲಿ ಕಟ್ಟಡ, ಯೋಗಾ, ಅಂಪಿ ಥಿಯೇಟರ್, ಪ್ರೋಮೊನೈಡ್, ಫೆಸ್ಟಿವಲ್ ಫ್ಲಾಜಾ, ಫುಡ್ ಕೋರ್ಟ, ಟಾಲೇಟ್ ಬ್ಲಾಕ್ & ಉದ್ಯಾನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಸದರಿ ಕೆರೆಯಲ್ಲಿನ ಪ್ರವಾಸ ಅಭಿವೃದ್ಧಿ ಇಲಾಖೆಯಿಂದ ಬೋಟಿಂಗ್ ಅಭಿವೃದ್ಧಿಗೊಳಿಸಲಾಗಿದೆ.<br><br>ಸದರಿ ಕೆರೆಯು ವಿಜಯಪುರ ನಗರದ ಆಯಕಟ್ಟಿನ ಸ್ಥಳದಲ್ಲಿದ್ದು, ಪ್ರವಾಸಿಗರಿಗೆ ಹಾಗೂ ಸ್ಥಳೀಯವರಿಗೆ ಆಕರ್ಷಣಾ ಕೇಂದ್ರವಾಗಲು ಅಭಿವೃದ್ಧಿಪಡಿಸಲಾಗಿದೆ. |
| ಈ) | ಈ ಕಾಮಗಾರಿಯನ್ನು ಯಾವ ಗುತ್ತಿಗೆದಾರರಿಗೆ ವಹಿಸಿಕೊಡಲಾಗಿತ್ತು ಹಾಗೂ ಸಾಧಿಸಲಾದ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿಯೇನು? | ಸದರಿ ಕಾಮಗಾರಿಯನ್ನು ಮೆ: ಆದಿತ್ಯ ಕನ್ಸ್ಟ್ರಕ್ಷನ್ಸ್, ಬೆಳಗಾವಿ ಇವರಿಗೆ ರೂ.1126.16ಲಕ್ಷ ಮೊತ್ತಕ್ಕೆ ಗುತ್ತಿಗೆ ವಹಿಸಲಾಗಿರುತ್ತದೆ ಹಾಗೂ ವಿನ್ಯಾಸವನ್ನು ಮೆ: ಕೆಂಭಾವಿ ಆರ್ಕಿಟೆಕ್ಟ್ ಇವರಿಗೆ ವಹಿಸಲಾಗಿದೆ. ಇಲ್ಲಿಯವರೆಗೆ 90% ಭೌತಿಕ ಕಾಮಗಾರಿ ಪೂರ್ಣಗೊಂಡಿದ್ದು, ರೂ.910.52 ಲಕ್ಷ ಆರ್ಥಿಕ ಪ್ರಗತಿಯನ್ನು ಸಾಧಿಸಲಾಗಿದೆ. |

ಸಂಖ್ಯೆ: ಜಸಂಇ 05 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ಆಇ 92 ಎಫ್‌ಸಿ-2 / 2020

ಕರ್ನಾಟಕ ಸರ್ಕಾರ ಸಚಿವಾಲಯ,
ವಿಧಾನಸೌಧ,
ಬೆಂಗಳೂರು. ದಿನಾಂಕ:04-03-2020

6H
U/S
10/03/2020

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರ್ಥಿಕ ಇಲಾಖೆ, ವಿಧಾನಸೌಧ,
ಬೆಂಗಳೂರು

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ, ವಿಧಾನಸೌಧ,
ಬೆಂಗಳೂರು

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ.ಗೂಳಿಹಟ್ಟಿ ಡಿ.ಶೇಖರ್, (ಹೊಸದುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 525ಕ್ಕೆ ಉತ್ತರಿಸುವ ಬಗ್ಗೆ

* * * * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನ ಸಭೆ ಸದಸ್ಯರಾದ ಶ್ರೀ.ಗೂಳಿಹಟ್ಟಿ ಡಿ.ಶೇಖರ್, (ಹೊಸದುರ್ಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 525ಕ್ಕೆ ಕನ್ನಡ ಭಾಷೆಯ 100 ಪ್ರತಿಯನ್ನು ಮುಂದಿನ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ವಿಶ್ವಾಸಿ,

Gayathri K
(ಕೆ.ಗಾಯಿತ್ರಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಲೋ.ಆ.ಕೋ)

04/03/2020

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 525
2. ಸದಸ್ಯರ ಹೆಸರು : ಶ್ರೀ. ಗೂಳಿಹಟ್ಟಿ ಡಿ.ಶೇಖರ್, (ಹೊಸದುರ್ಗ),
3. ಉತ್ತರಿಸಬೇಕಾದ ದಿನಾಂಕ : 10-03-2020
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

<table>
<tr><th>ಕ್ರಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>1</td><td>2017 ರಿಂದ 2019ರ ಅಂತ್ಯದವರೆಗೆ ಆರ್ಥಿಕ ಇಲಾಖೆಯಿಂದ ಲೋಕೋಪಯೋಗಿ ಇಲಾಖೆಗೆ ನೀಡಿದ ಅನುದಾನವೆಷ್ಟು; ನಿಗದಿಪಡಿಸಿದ ಹಾಗೂ ಬಿಡುಗಡೆಗೊಳಿಸಿದ ಅನುದಾನವೆಷ್ಟು? (ಪೂರ್ಣ ವಿವರಗಳನ್ನು ಇಲಾಖಾವಾರು ಪ್ರತ್ಯೇಕವಾಗಿ ನೀಡುವುದು)</td><td>2017 ರಿಂದ 2019-20ನೇ ಸಾಲಿನ ಫೆಬ್ರವರಿ ಅಂತ್ಯದವರೆಗೆ ಲೋಕೋಪಯೋಗಿ ಇಲಾಖೆಗೆ ಒದಗಿಸಿದ ಅನುದಾನವು ಈ ಕೆಳಕಂಡಂತಿರುತ್ತದೆ.<br>(ರೂ.ಲಕ್ಷಗಳಲ್ಲಿ)<br><table><tr><th>ಆರ್ಥಿಕ ವರ್ಷ</th><th>ಆಯವ್ಯಯದಲ್ಲಿ ಒದಗಿಸಿದ ಅನುದಾನ</th></tr><tr><td>2017-18</td><td>917631.36</td></tr><tr><td>2018-19</td><td>951255.00</td></tr><tr><td>2019-20</td><td>948746.37</td></tr></table>ಮುಂದುವರೆದು, ಆರ್ಥಿಕ ಇಲಾಖೆಯಿಂದ ಆಯವ್ಯಯದಲ್ಲಿ ಒದಗಿಸಿದ ಅನುದಾನವನ್ನು ಬಿಡುಗಡೆ ಮಾಡಲು ಇಲಾಖೆಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿಗಳಿಗೆ ಕಾಲಕಾಲಕ್ಕೆ ಅಧಿಕಾರ ಪ್ರತ್ಯಾಯೋಜಿಸಿ ಆದೇಶಿಸಲಾಗುತ್ತಿದೆ. ಅದರಂತೆ ಲೋಕೋಪಯೋಗಿ ಇಲಾಖೆಯಿಂದ ಬಿಡುಗಡೆ ಮಾಡಿದ ಅನುದಾನದ ವಿವರ ಕೆಳಗಿನಂತಿದೆ.<br>(ರೂ.ಲಕ್ಷಗಳಲ್ಲಿ)<br><table><tr><th>ಆರ್ಥಿಕ ವರ್ಷ</th><th>ಬಿಡುಗಡೆ ಮಾಡಲಾದ ಅನುದಾನ</th></tr><tr><td>2017-18</td><td>905078.58</td></tr><tr><td>2018-19</td><td>947941.92</td></tr><tr><td>2019-20 (ಫೆಬ್ರವರಿ 2020ರ ಅಂತ್ಯಕ್ಕೆ)</td><td>731824.19</td></tr></table></td></tr>
</table>

ಸಂಖ್ಯೆ: FD 92 FC-2/2020

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 09 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.03.2020

**ಇವರಿಂದ:**

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:905ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:905ಕೆ ಉತ್ತರದ 100 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 905
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್(ಬೈಲಹೊಂಗಲ)
ಉತ್ತರಿಸುವ ದಿನಾಂಕ : 10/03/2020
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೈಲಹೊಂಗಲ ಮತಕ್ಷೇತ್ರದ ರೈತರು ಮಲಪ್ರಭಾ ಯೋಜನೆಯಡಿ ಭೂಮಿಯನ್ನು ಸಂಪೂರ್ಣವಾಗಿ ಕಳೆದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಹಾಗಿದ್ದಲ್ಲಿ, ಭೂಮಿಯನ್ನು ಕಳೆದುಕೊಂಡಿರುವ ರೈತರಿಗೆ ಅನುಕೂಲವಾಗಲೆಂದು ಅಂದಿನ ಸರ್ಕಾರ ಏತ ನೀರಾವರಿ ಯೋಜನೆಯನ್ನು ಜಾರಿಗೆ ತಂದಿರುವುದು ನಿಜವಲ್ಲವೇ; | ಭೂಮಿಯನ್ನು ಕಳೆದುಕೊಂಡಿರುವ ರೈತರಿಗೆ ಅನುಕೂಲವಾಗಲೆಂದು ಮಲಪ್ರಭಾ ಜಲಾಶಯದ ಅಂಚಿನವರೆಗೆ ಬೈಲಹೊಂಗಲ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಮಲ್ಲೂರು-ಮಾಟೊಳ್ಳಿ, ಹೊಸೂರ-ವಕ್ಕುಂದ, ದೇವಲಾಪೂರ, ಜಾಲಿಕೊಪ್ಪ, ಕೆಂಗಾನೂರು, ಬೂದಿಹಾಳ ಹಾಗೂ ಏಣಗಿ-ಹಿಟ್ಟಣಗಿ ಸೇರಿದಂತೆ ಒಟ್ಟು 7 ಏತ ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸಲಾಗಿದೆ. |
| ಇ | ಅನೇಕ ವರ್ಷಗಳಿಂದ ಈ ಏತ ನೀರಾವರಿ ಸಂಪೂರ್ಣವಾಗಿ ನಿಂತು ಹೋಗಿದ್ದರಿಂದ ಈ ಭಾಗದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ 7 ಏತ ನೀರಾವರಿ ಯೋಜನೆಗಳಲ್ಲಿ ಜಾಲಿಕೊಪ್ಪ, ದೇವಲಾಪೂರ, ಹಾಗೂ ಹೊಸೂರ-ವಕ್ಕುಂದ ಗಳಾದ 3 ಏತ ನೀರಾವರಿ ಯೋಜನೆಗಳು ದುರಸ್ತಿಯಲ್ಲಿವೆ. |
| ಈ | ಬಂದಿದ್ದಲ್ಲಿ, ಈ ಏತ ನೀರಾವರಿ ಯೋಜನೆಯನ್ನು ಪುನಶ್ಚೇತನಗೊಳಿಸಲು ಯಾವಾಗ ಕ್ರಮ ಕೈಗೊಳ್ಳಲಾಗುವುದು? | ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ರೂ.80.00 ಕೋಟಿ ವೆಚ್ಚದಲ್ಲಿ ಬೈಲಹೊಂಗಲ ಮತಕ್ಷೇತ್ರದಲ್ಲಿ ನೀರಾವರಿ ಯೋಜನೆಯನ್ನು ಘೋಷಿಸಲಾಗಿದ್ದು, ಅದರಂತೆ ಸದರಿ ಪ್ರಸ್ತಾವನೆಯಡಿ ಜಾಲಿಕೊಪ್ಪ, ಬೂದಿಹಾಳ ಹಾಗೂ ಕೆಂಗಾನೂರ ಏತ ನೀರಾವರಿ ಯೋಜನೆಗಳನ್ನು ಪುನಶ್ಚೇತನಗೊಳಿಸಲು ವಿವರವಾದ ಯೋಜನಾ ವರದಿಯನ್ನು ಸಿದ್ಧಪಡಿಸಲಾಗಿದ್ದು, ನಿಗಮದ ನಿರ್ದೇಶಕರ ಮಂಡಳಿ ಸಭೆಯ ಅನುಮೋದನೆ ಪಡೆಯಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಜಸಂಇ 09 ಡಬ್ಲ್ಯೂಬಿಎಂ 2020

(ರಮೇಶ್ ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

ಕರ್ನಾಟಕ ಸರ್ಕಾರ

ಸಂಖ್ಯೆ: ಜಸಂಇ 14 ಡಬ್ಲ್ಯೂಬಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 09.03.2020

39
10/3/20

**ಇವರಿಂದ:**

ಸರ್ಕಾರದ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಬಸನಗೌಡ ಆರ್.ಪಾಟೀಲ್ (ಯತ್ನಾಳ್) (ವಿಜಯಪುರ ನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:534ಕ್ಕೆ ಉತ್ತರ ಸಲ್ಲಿಸುವ ಬಗ್ಗೆ.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಶ್ರೀ ಬಸನಗೌಡ ಆರ್.ಪಾಟೀಲ್ (ಯತ್ನಾಳ್) (ವಿಜಯಪುರ ನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:534ಕ್ಕೆ ಉತ್ತರದ 100 ಪ್ರತಿಗಳನ್ನು ಇದರೊಡನೆ ಲಗತ್ತಿಸಿ, ಮುಂದಿನ ಸೂಕ್ತ ಕ್ರಮಕ್ಕಾಗಿ ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ವಿಶ್ವಾಸಿ,

(ರವೀಂದ್ರ ಕೊಂಡ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ತಾಂತ್ರಿಕ-5)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 534
ಸದಸ್ಯರ ಹೆಸರು : ಶ್ರೀ ಬಸವನಗೌಡ ಆರ್. ಪಾಟೀಲ್ (ಯತ್ನಾಳ್) (ವಿಜಯಪುರ ನಗರ)
ಉತ್ತರಿಸುವ ದಿನಾಂಕ : 10.03.2020
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಆಲಮಟ್ಟಿ ಹಿನ್ನೀರಿನಿಂದ ಒಟ್ಟು ಎಷ್ಟು ಎಕರೆ ಭೂಮಿ ಮುಳುಗಡೆಯಾಗಿದೆ; ಸರ್ಕಾರ ಭೂಸ್ವಾಧೀನಪಡಿಸಿ ಕೊಂಡಿರುವ ಭೂಮಿ ಎಷ್ಟು (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು); | ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-1 ಮತ್ತು 2ರಲ್ಲಿ ಆಲಮಟ್ಟಿ ಹಿನ್ನೀರಿನಿಂದ 1,38,280 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಪರಿಹಾರವನ್ನು ನೀಡಲಾಗಿದೆ.<br>ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿ ಆಲಮಟ್ಟಿ ಜಲಾಶಯದ ನೀರಿನ ಸಂಗ್ರಹಣೆ ಮಟ್ಟ ಆರ್.ಎಲ್.519.60 ಮೀ. ದಿಂದ 524.256 ಮೀ.ವರೆಗೆ ಎತ್ತರಿಸಿ ನೀರನ್ನು ಸಂಗ್ರಹಿಸಲು ಹಿನ್ನೀರಿನಲ್ಲಿ 75,563 ಎಕರೆ ಜಮೀನು ಭೂಸ್ವಾಧೀನಕ್ಕೆ ಒಳಪಡಿಸಬೇಕಾಗಿರುತ್ತದೆ. ಇಲ್ಲಿಯವರೆಗೂ 728 ಎಕರೆ ಜಮೀನು ಕ್ಷೇತ್ರಕ್ಕೆ ಐತೀರ್ಪು ಆಗಿದ್ದು, ಭೂಸ್ವಾಧೀನಕ್ಕೆ ಒಳಪಡಿಸಲಾಗಿದೆ. ತಾಲ್ಲೂಕುವಾರು ವಿವರ ಈ ಕೆಳಗಿನಂತಿದೆ: |

| ಕ್ರ.ಸಂ | ತಾಲ್ಲೂಕು | ಗ್ರಾಮಗಳ ಸಂಖ್ಯೆ | ಭೂಸ್ವಾಧೀನಕ್ಕೆ ಒಳಪಡುವ ಕ್ಷೇತ್ರವ (ಎ-ಗುಂ) |
|---|---|---|---|
| 1 | ಅಥಣಿ | 6 | 2956 |
| 2 | ಬಸವನಬಾಗೇವಾಡಿ | 18 | 6357 |
| 3 | ಬಾಗಲಕೋಟ | 45 | 13369 |
| 4 | ವಿಜಯಪುರ | 15 | 5587 |
| 5 | ಬೀಳಗಿ | 49 | 20337 |
| 6 | ಜಮಖಂಡಿ | 29 | 21032 |
| 7 | ಮುಧೋಳ | 26 | 5925 |
| | **ಒಟ್ಟು** | **188** | **75563** |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| (ಆ) | ಭೂಸ್ವಾಧೀನಪಡಿಸಿಕೊಳ್ಳಲಾದ ಭೂಮಿಗೆ ಪರಿಹಾರ ಹಣ ಸಂಪೂರ್ಣವಾಗಿ ವಿತರಣೆ ಆಗಿದೆಯೇ; ಪರಿಹಾರ ಹಣ ವಿತರಣೆ ಬಾಕಿ ಇರುವ ಪ್ರಕರಣಗಳು ಎಷ್ಟು; ಯಾವ ಕಾರಣಕ್ಕೆ ಪರಿಹಾರ ಹಣ ವಿತರಣೆಯಾಗಿರುವುದಿಲ್ಲ (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು); | ಕೃ.ಮೇ.ಯೋ ಹಂತ-3ರಡಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆ ಹೊಂದುವ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಯ ಸಂಯುಕ್ತ ಮೋಜಣಿಗಾಗಿ (Joint Measurement Survey) ರೈತರು ಏಕರೂಪ ಭೂಪರಿಹಾರ ನಿಗದಿಪಡಿಸಲು ಆಗ್ರಹಿಸುತ್ತಿದ್ದು ಭೂಸ್ವಾಧೀನ ಪ್ರಕ್ರಿಯೆಗೆ ಅಡಚಣೆ ಮಾಡುತ್ತಿರುವರು. ಇದರಿಂದ, ಭೂಸ್ವಾಧೀನದ ಪ್ರಕರಣಗಳು ಹಿನ್ನಡೆಯಾಗಿ ಅಸಿಂಧು ಆಗುತ್ತಿದ್ದು, ಪ್ರತಿ ವರ್ಷ ಆಯವ್ಯಯದಲ್ಲಿ ಅನುದಾನ ಹಂಚಿಕೆಯಾದರೂ ಸಹ ಭೂ ಪರಿಹಾರ ಹಣ ವಿತರಣೆಯಾಗಿರುವುದಿಲ್ಲ. ಕೃ.ಮೇ.ಯೋ. ಹಂತ-3ರಡಿಯ ಜಮೀನುಗಳ ಭೂಸ್ವಾಧೀನತೆಗೆ ಏಕರೂಪ ಭೂಪರಿಹಾರ ಕುರಿತು ನಿರ್ಧರಿಸಲು ಸಂಪುಟ ಉಪ ಸಮಿತಿಯನ್ನು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ರಚಿಸಿದ್ದು, ಅದರ ನಿರ್ಣಯದಂತೆ ಕ್ರಮ ಜರುಗಿಸಲಾಗುವುದು. |

| | | |
|---|---|---|
| (ಇ) | ಭೂಸ್ವಾಧೀನ ಪರಿಹಾರ ವಿತರಣೆಯಲ್ಲಿ ಹಗರಣ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಹಗರಣದ ಸ್ವರೂಪವೇನು; ಈ ಕುರಿತು ಕೈಗೊಂಡಿರುವ ಕ್ರಮಗಳೇನು (ಸಂಪೂರ್ಣ ವಿವರ ನೀಡುವುದು); | ಇಂತಹ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

ಸಂಖ್ಯೆ: ಜಸಂಇ 14 ಡಬ್ಲ್ಯೂಬಿಎಂ 2020

(ರಮೇಶ್ ಲ. ಜಾರಕಿಹೊಳಿ)
ಜಲ ಸಂಪನ್ಮೂಲ ಸಚಿವರು

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 09 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:04.03.2020

1744
U/S
10/3/20

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್. ಡಿ.ಎಸ್ (ತರೀಕೆರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **33** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್. ಡಿ.ಎಸ್ (ತರೀಕೆರೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **33** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 33

ಸದಸ್ಯರ ಹೆಸರು : ಶ್ರೀ ಸುರೇಶ್. ಡಿ.ಎಸ್ (ತರೀಕೆರೆ)

ಉತ್ತರಿಸಬೇಕಾದ ದಿನಾಂಕ : 10-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ತರೀಕೆರೆ ತಾಲ್ಲೂಕಿನಾದ್ಯಂತ ದೀನದಯಾಳ್ ಉಪಾಧ್ಯಾಯ ಗ್ರಾಮಜ್ಯೋತಿ ಯೋಜನೆ ಕಾಮಗಾರಿಯು ಹಾಗೂ ತರೀಕೆರೆ ಮತ್ತು ಅಜ್ಜಂಪುರ ತಾಲ್ಲೂಕಿನಾದ್ಯಂತ ಎನ್.ಜೆ.ವೈ ಕಾಮಗಾರಿಯು ನಡೆಯುತ್ತಿದ್ದು ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಯಿಂದ ಎಷ್ಟು ದೂರದಲ್ಲಿ ಕಂಬಗಳನ್ನು ನಿಲ್ಲಿಸಲು ಅನುಮತಿ ನೀಡಲಾಗಿದೆ; | ತರೀಕೆರೆ ತಾಲ್ಲೂಕಿನಾದ್ಯಂತ ಪೂರ್ಣಗೊಂಡಿರುವ ದೀನದಯಾಳ್ ಉಪಾಧ್ಯಾಯ ಗ್ರಾಮಜ್ಯೋತಿ ಯೋಜನೆಯ ಗ್ರಾಮೀಣ ವಿದ್ಯುದ್ದೀಕರಣ ಕಾಮಗಾರಿಯಲ್ಲಿ ಹಾಗೂ ತರೀಕೆರೆ ಮತ್ತು ಅಜ್ಜಂಪುರ ತಾಲ್ಲೂಕಿನಾದ್ಯಂತ ನಡೆಯುತ್ತಿರುವ ನಿರಂತರಜ್ಯೋತಿ ಕಾಮಗಾರಿಯಲ್ಲಿ ರಾಷ್ಟ್ರೀಯ ಮತ್ತು ರಾಜ್ಯ ಹೆದ್ದಾರಿಯಲ್ಲಿ ವಾಹನಗಳಿಗೆ ಹಾಗೂ ಸಾರ್ವಜನಿಕರಿಗೆ ತೊಂದರೆಯಾಗದಂತೆ ಹಾಲಿ ಇರುವ ಟಾರ್‌ರಸ್ತೆಯನ್ನು ಬಿಟ್ಟು ರಸ್ತೆಯ ಬದಿಯಲ್ಲಿ ಕಂಬಗಳನ್ನು ನಡಲಾಗಿದೆ. |
| ಆ) | ಈಗಾಗಲೇ ನಡೆಯುತ್ತಿರುವ ಕಾಮಗಾರಿಯಲ್ಲಿ ವಿದ್ಯುತ್ ಕಂಬಗಳನ್ನು ಚರಂಡಿಗಳಲ್ಲಿ ಹಾಗೂ ರಸ್ತೆಯಲ್ಲಿ ಅವೈಜ್ಞಾನಿಕವಾಗಿ ನಿಲ್ಲಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕಾಮಗಾರಿಯಲ್ಲಿ ತರೀಕೆರೆ ಮತ್ತು ಅಜ್ಜಂಪುರ ತಾಲ್ಲೂಕಿನಲ್ಲಿ ಸ್ಥಳ ಪರಿಶೀಲಿಸಿ ಈಗಾಗಲೇ ಚರಂಡಿಯಲ್ಲಿ ನೆಡಲಾದ ಕೆಲವೊಂದು ಕಂಬಗಳನ್ನು ಸ್ಥಳಾಂತರಿಸಲಾಗಿದೆ. ಮುಂದುವರೆದು ಸದರಿ ತಾಲ್ಲೂಕಿನಾದ್ಯಂತ ಈಗಾಗಲೇ ವಿದ್ಯುತ್ ಸಂಪರ್ಕ ಕಲ್ಪಿಸುವ ವಿದ್ಯುತ್ ಮಾರ್ಗಗಳು ಹಾದು ಹೋಗಿದ್ದು, ಕೆಲವೊಂದು ಕಡೆಯಲ್ಲಿ ರಸ್ತೆಯ ತಿರುವಿನಲ್ಲಿ ಜಾಗ ಇಲ್ಲದಿರುವುದರಿಂದ ಮತ್ತು ರೈತರು ಈಗಾಗಲೇ ತಮ್ಮ-ತಮ್ಮ ಹೊಲಗಳಿಗೆ ಬೇಲಿ ಹಾಕಿಕೊಂಡಿರುವುದರಿಂದ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಚರಂಡಿಯ ಬದಿಯಲ್ಲಿ ಕಂಬಗಳನ್ನು ನೆಡಲಾಗಿದೆ. |

ಸಂಖ್ಯೆ: ಎನರ್ಜಿ 09 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂ: ಆಇ 19 ಕವಿಇ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 04.03.2020.

133

U/S
10/3/2020

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಆರ್ಥಿಕ ಇಲಾಖೆ, ವಿಧಾನ ಸೌಧ,
ಬೆಂಗಳೂರು-560001.

ಇವರಿಗೆ:
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು

ಮಾನ್ಯರೆ,

ವಿಷಯ: ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ., ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 665ಕ್ಕೆ ಉತ್ತರ ಕಳುಹಿಸಿಕೊಡುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿಗಳು, ಕರ್ನಾಟಕ ವಿಧಾನಸಭೆ, ಇವರ ಪತ್ರ ಸಂ: ಪ್ರಶಾವಿಸ/15ನೇ ವಿಸ/6ಅ/ಪ್ರ.ಸಂ. 665/2020 ದಿ:27.02.2020.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಪತ್ರದ ಕಡೆಗೆ ತಮ್ಮ ಗಮನ ಸೆಳೆಯಲಾಗಿದೆ. ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ ರವಿಸುಬ್ರಹ್ಮಣ್ಯ ಎಲ್.ಎ., ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 665ಕ್ಕೆ ಸಂಬಂಧಿಸಿದಂತೆ ಉತ್ತರವನ್ನು ತಯಾರಿಸಿ 100 ಪ್ರತಿಗಳನ್ನು ಸಿದ್ಧಪಡಿಸಿ ಇದರೊಂದಿಗೆ ಕಳುಹಿಸಿಕೊಡಲಾಗಿದೆ.

ತಮ್ಮ ವಿಶ್ವಾಸಿ,

(ಜಿ.ಶಶಿಧರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡಗಳು).

4/3/2020

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 665

ಸದಸ್ಯರ ಹೆಸರು : ಶ್ರೀ ರವಿಸುಬ್ರಹ್ಮಣ್ಯ ಎಲ್.ಎ

ಉತ್ತರಿಸಬೇಕಾದ ದಿನಾಂಕ : 10.03.2020

ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯ ಸರ್ಕಾರಿ ನೌಕರರಿಗೆ 2014–15 ಹಾಗೂ 2015–16ನೇ ಸಾಲಿನ ಕೆ.ಜಿ.ಐ.ಡಿ. ಬೋನಸ್ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) ಬಂದಿದ್ದಲ್ಲಿ, ಯಾವಾಗ, ಎಷ್ಟು ಬೋನಸ್ ನೀಡಲಾಗುವುದು; (ಸಂಬಂಧಪಟ್ಟ ಆದೇಶದ ಪ್ರತಿ ನೀಡುವುದು) | ರಾಜ್ಯ ಸರ್ಕಾರಿ ನೌಕರರಿಗೆ 2014–15 ಹಾಗೂ 2015–16ರ ಅವಧಿಗೆ ಬೋನಸ್ ನಿಗದಿಪಡಿಸುವ ಪ್ರಸ್ತಾವನೆ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಿಂದ ಸ್ವೀಕೃತವಾಗಿದೆ. ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಇ) ಕೆ.ಜಿ.ಐ.ಡಿ. ಇಲಾಖೆ ಗಣಕೀಕೃತಗೊಳಿಸುವ ಪ್ರಕ್ರಿಯೆಯು ಯಾವ ಹಂತದಲ್ಲಿದೆ ಹಾಗೂ ಸದರಿ ಪ್ರಕ್ರಿಯೆಯನ್ನು ಯಾವ ಸಂಸ್ಥೆಗೆ ವಹಿಸಲಾಗಿದೆ? (ಆದೇಶದ ಪ್ರತಿ ನೀಡುವುದು) | ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಸಮಗ್ರ ಗಣಕೀಕರಣಕ್ಕೆ ಅವಶ್ಯವಿರುವ ಗಣಕ ಯಂತ್ರಗಳನ್ನು ಹಾಗೂ ಪ್ರಿಂಟರ್ಸ್ ಇತ್ಯಾದಿಗಳನ್ನು ಖರೀದಿಸಲು ತಾಂತ್ರಿಕ ಸಲಹಾ ಸಮಿತಿ (TAP) ಸಭೆ ನಡೆಸಲಾಗಿದೆ. ಸರ್ಕಾರಿ ಆದೇಶ ಸಂ: ಆಇ 74 ಕವಿಇ 2017, ದಿ:22.10.2019ರಲ್ಲಿ ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಸಮಗ್ರ ಗಣಕೀಕರಣದ ಸಾಫ್ಟ್ ವೇರ್ ಅಭಿವೃದ್ಧಿ ಮತ್ತು ನಿರ್ವಹಣೆ ಕಾರ್ಯವನ್ನು ಸಿ.ಎಸ್.ಜಿ. (Center for Smart Governance) ಇವರಿಗೆ ವಹಿಸಲಾಗಿದೆ. (ಆದೇಶದ ಪ್ರತಿ ಲಗತ್ತಿಸಿದೆ.) |

ಸಂಖ್ಯೆ: ಆಇ 19 ಕವಿಇ 2020

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಗಣಕೀಕರಣಕ್ಕೆ ಸಾಫ್ಟ್ ವೇರ್ ಅಭಿವೃದ್ಧಿ ಮತ್ತು ನಿರ್ವಹಣೆಗಾಗಿ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ: 1. ಕಾರ್ಯಕಾರಿ ನಿರ್ದೇಶಕರು, Center for Smart Governance, ಇವರ ಪತ್ರ ಸಂ: ಸಿಎಸ್‌ಜಿ/001/ಪಿಆರ್‌ಜೆ-ಕೆಜಿಐಡಿ/2019, ದಿ.25.09.2019.

2. ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ಇವರ ಪತ್ರ ಸಂ: KGID/IT/COMP/18/2019, ದಿ.18.09.2019.

* * * * *

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಸಂಪೂರ್ಣ ಗಣಕೀಕರಣಕ್ಕೆ ಸಂಬಂಧಿಸಿದಂತೆ ಸಿ.ಎಸ್.ಜಿ. ಸಂಸ್ಥೆಯವರು ಮೇಲೆ ಓದಲಾದ (1)ರ ಪ್ರಸ್ತಾವನೆಯಲ್ಲಿ ವಿಮಾ ಇಲಾಖೆಯ ಸಂಪೂರ್ಣ ಗಣಕೀಕರಣಕ್ಕೆ ತಗಲುವ ವೆಚ್ಚದ ಪಾವತಿ ಕುರಿತು ಮೈಲುಗಲ್ಲುಗಳನ್ನು ತಯಾರಿಸಿ ಈ ಕೆಳಕಂಡಂತೆ ಸಲ್ಲಿಸಿರುತ್ತಾರೆ:

| Sl. No. | Milestones | Payments %age to be released (INR) |
|---|---|---|
| 1. | Advance amount | 40% of Total Cost plus Operational support cost for support cost for support executives 10 nos. (for a period of 1 year) |
| 2. | On completion of development of the modules; Life Insurance & Motor Insurance. | 20% of Total Cost. |
| 3. | On completion of development of the modules; Group Insurance & Loan management. | 20% of Total Cost. |
| 4. | On completion of development of the modules; Family Benefit Fund (Enrolment, Payment, Claims etc.) Admin & MIS modules. | 20% of Total Cost. |
| 5. | Post completion of training on System Administration & Database Administration for KGID staff (6 nos.) for 7 days. | Full amount as mentioned in CSG proposal. |
| 6. | KGID Application training to all concerned staff (approx. 200 nos) at Bangalore. | Full amount as mentioned in CSG proposal |
| 7. | After Go Live;<br>Cost for Application Support/Maintenance of Integrated Solution for KGID for a period of one year. | Full amount as mentioned in CSG proposal. |

ಕರ್ನಾಟಕ ಸರ್ಕಾರ ವಿಮಾ ಇಲಾಖೆಯ ಸಂಪೂರ್ಣ ಗಣಕೀಕರಣಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ (2)ರ ವಿಮಾ ನಿರ್ದೇಶಕರ ಪತ್ರದಲ್ಲಿ ವಿಮಾ ಇಲಾಖೆಯ ಗಣಕೀಕರಣ ಕಾರ್ಯಕ್ಕೆ ಅಗತ್ಯವಾದ ತಂತ್ರಾಂಶ ತಯಾರಿಕೆಯ ಪೂರ್ವ ಸಿದ್ಧತೆಗಳನ್ನು ಪ್ರಾರಂಭಿಸಲಾಗಿದ್ದು, ತಂತ್ರಾಂಶ ತಯಾರಿಕೆಗೆ ಹಾಗೂ ನಿರ್ವಹಣೆಗೆ ತಗಲುವ ವೆಚ್ಚದ ವಿವರಗಳನ್ನು ಈ ಕೆಳಕಂಡಂತೆ ನೀಡಿರುತ್ತಾರೆ.

| Sl. No. | Description | Cost (in Rs.) |
|---|---|---|
| 1 | Cost of design, development and implementation of the integrated solution. | 1,30,95,17.45 |
| 2 | CSG Overheads | 39,28,551.14 |
| 3 | Project Cost (incl.Overhead cost) | 1,70,23,721.59 |
| 4 | GST 18% | 30,64,269.89 |
| | **Total** | **2,00,87,991.48** |

| Sl. No. | Description | Cost (in Rs.) |
|---|---|---|
| 1 | Support Executives cost for 1 year – 10 executives | 30,00,000.00 |
| 2 | System Admin and Database Admin training for KGID Staff | 1,75,000.00 |
| 3 | KGID application training | 5,00,000.00 |
| | Total | 36,75,000.00 |

ಈ ಮೇಲಿನ ಅಂಶಗಳೊಂದಿಗೆ ವಿಮಾ ಇಲಾಖೆಯ ಸಂಪೂರ್ಣ ಗಣಕೀಕರಣ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ, ಸಿ.ಎಸ್.ಜಿ. ಸಂಸ್ಥೆಯವರಿಗೆ ಅಭಿವೃದ್ಧಿ ಕಾರ್ಯವನ್ನು ಪ್ರಾರಂಭಿಸಲು ಅನುಮತಿ ಹಾಗೂ ಕಾರ್ಯಕಾರಿ ಆದೇಶ ನೀಡಲು ಅನುವಾಗುವಂತೆ ಪ್ರಸ್ತಾವನೆಗೆ ಸಂಬಂಧಿಸಿದಂತೆ ವೆಚ್ಚ ಭರಿಸಲು ಕ್ರಿಯಾ ಯೋಜನೆಗೆ ಆರ್ಥಿಕ ಮಂಜೂರಾತಿಗೆ ಅನುಮೋದನೆಯನ್ನು ನೀಡುವಂತೆ ಕೋರಿರುತ್ತಾರೆ. ಸದರಿ ವೆಚ್ಚವನ್ನು ಆರ್ಥಿಕ ವರ್ಷ 2019-20ನೇ ಸಾಲಿನ 'ಲೆ.ಶೀ. 2235-60-110-1-00-125-ಆಧುನೀಕರಣ' ರಡಿ ಒದಗಿಸಿರುವ ರೂ.1.00ಕೋಟಿ ಅನುದಾನದಿಂದ ಭರಿಸುವುದಾಗಿ ತಿಳಿಸಿರುತ್ತಾರೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ಕಾರ್ಯಕಾರಿ ನಿರ್ದೇಶಕರು, ಸಿ.ಎಸ್.ಜಿ ಮತ್ತು ನಿರ್ದೇಶಕರು, ವಿಮಾ ಇಲಾಖೆ, ಇವರ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 74 ಕವಿಇ 2017, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2019.**

ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ಸಂಪೂರ್ಣ ಗಣಕೀಕರಣ ಯೋಜನೆಗೆ ಸಂಬಂಧಿಸಿದಂತೆ ಸಿ.ಎಸ್.ಜಿ. (Center for Smart Governance) ಇವರಿಗೆ ಸಾಫ್ಟ್ ವೇರ್ ಅನ್ನು ಅಭಿವೃದ್ಧಿಪಡಿಸಲು ರೂ.200.88ಲಕ್ಷಗಳು ಮತ್ತು ನಿರ್ವಹಣೆಗಾಗಿ ರೂ.36.75ಲಕ್ಷಗಳಿಗೆ ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಲೆ.ಶೀ."2235-60-110-1-00-125-ಆಧುನೀಕರಣ" ರಡಿ ಒದಗಿಸಲಾದ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಜಿ. ಶಶಿಧರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡಗಳು)
22/X/19

ಗೆ:

1. ಪ್ರಧಾನ ಮಹಾಲೇಖಪಾಲರು (ಜಿ & ಎಸ್.ಎಸ್.ಎ.), ಕರ್ನಾಟಕ, ಬೆಂಗಳೂರು.
2. ಪ್ರಧಾನ ಮಹಾಲೇಖಪಾಲರು (ಎ&ಇ), ಕರ್ನಾಟಕ, ಬೆಂಗಳೂರು.
3. ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು.
4. ಕಾರ್ಯಕಾರಿ ನಿರ್ದೇಶಕರು, ಸೆಂಟರ್ ಫಾರ್ ಸ್ಮಾರ್ಟ್ ಗೌವರ್ನೆನ್ಸ್, ಕೊಠಡಿ ಸಂ:145, ಬಹುಮಹಡಿ ಕಟ್ಟಡ, ಬೆಂಗಳೂರು.
5. ಸರ್ಕಾರದ ಕಾರ್ಯದರ್ಶಿ, ಖಜಾನೆ-2, 7ನೇ ಮಹಡಿ, ವಾಣಿಜ್ಯ ತೆರಿಗೆ ಇಲಾಖೆ ಕಟ್ಟಡ, ಗಾಂಧಿನಗರ, ಬೆಂಗಳೂರು.
6. ಆಯುಕ್ತರು, ಖಜಾನೆ ಇಲಾಖೆ, ವಿ.ವಿ. ಕೇಂದ್ರ ಮುಖ್ಯ ಗೋಪುರ, ಬೆಂಗಳೂರು.
7. ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣೆ ಕೇಂದ್ರ (ಟಿಎನ್‌ಎಂಸಿ) ಖನಿಜ ಭವನ, ಬೆಂಗಳೂರು.
8. ಕಛೇರಿ ಪ್ರತಿ/ಶಾಖಾ ರಕ್ಷಾ ಕಡತ/ ಹೆಚ್ಚುವರಿ ಪ್ರತಿಗಳು.

## ಕರ್ನಾಟಕ ಸರ್ಕಾರ

ಸಂಖ್ಯೆ: ಇ-ಸಿಆಸುಇ 18 ಸೇನಿಡಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ: 09.03.2020

127
U/S
10/03/2020

**ಇವರಿಂದ:**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನ ಸೌಧ, ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಎ.ಟಿ. ರಾಮಸ್ವಾಮಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 401 ಕ್ಕೆ ಉತ್ತರ ನೀಡುವ ಬಗ್ಗೆ.

*****

ದಿನಾಂಕ: 10.03.2020ರಂದು ಮಾನ್ಯ ಮುಖ್ಯಮಂತ್ರಿಯವರು ಉತ್ತರಿಸಬೇಕಾಗಿರುವ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಎ.ಟಿ. ರಾಮಸ್ವಾಮಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 401 ಕ್ಕೆ ಸಂಬಂಧಿಸಿದ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಅಗತ್ಯ ಕ್ರಮಕ್ಕಾಗಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

09/03/2020
(ಎ.ವಿ.ಶೈಲಜ)
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-2)

**ಪ್ರತಿ:-**

1. ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಕಾರ್ಯದರ್ಶಿಯವರು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.
3. ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 401

ಸದಸ್ಯರ ಹೆಸರು : ಶ್ರೀ ರಾಮಸ್ವಾಮಿ ಎ.ಟಿ. (ಅರಕಲಗೂಡು)

ಉತ್ತರಿಸುವ ದಿನಾಂಕ : 10.03.2020.

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಪ್ರಶ್ನೆ | ಉತ್ತರ |
|---|---|
| ರಾಜ್ಯ ಸರ್ಕಾರದ ಬಹುತೇಕ ಇಲಾಖೆಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ನೇಮಕಾತಿಯಾಗುತ್ತಿರುವುದರಿಂದ, ಆಡಳಿತದಲ್ಲಿ ದಕ್ಷತೆ ಕುಗ್ಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಇಲಾಖೆಗಳಲ್ಲಿ ಕೆಲವು ನಿರ್ದಿಷ್ಟ ಸೇವೆಗಳನ್ನು, ಅಂದರೆ ಸ್ವಚ್ಛತೆ, ಸುರಕ್ಷತೆ, ವಾಹನ ಚಾಲನೆ, ಡಾಟಾ ಎಂಟ್ರಿ, ಗಣಕ ಯಂತ್ರಗಳ ನಿರ್ವಹಣೆಯಂತಹ ಸೇವೆಗಳನ್ನು ಹೊರಗುತ್ತಿಗೆ ಮೂಲಕ ನಿರ್ವಹಿಸಲಾಗುತ್ತಿದೆ. ಇಂತಹ ಹೊರ ಗುತ್ತಿಗೆಯಿಂದ ಸರ್ಕಾರದ ಆಡಳಿತದ ಕಾರ್ಯ ದಕ್ಷತೆಯಲ್ಲಿ ಯಾವುದೆ ಕೊರತೆಯಾಗದಂತೆ ಈ ಸೇವೆಗಳನ್ನು ಹೊರಗುತ್ತಿಗೆ ಮುಖಾಂತರ ನಿರ್ವಹಿಸಲಾಗುತ್ತಿದೆ. |
| ಕೆಲವು ಇಲಾಖೆಗಳ ಲೆಕ್ಕಪತ್ರ ಶಾಖೆಗಳಲ್ಲಿಯೂ ಹೊರಗುತ್ತಿಗೆ ನೌಕರರೇ ಕಾರ್ಯನಿರ್ವಹಿಸುತ್ತಿದ್ದು, ಅಂತಹ ಸಿಬ್ಬಂದಿಯವರಿಗೆ ಉತ್ತರದಾಯಿತ್ವ ಇದೆಯೇ; | ಕೆಲವು ಇಲಾಖೆಗಳ ಲೆಕ್ಕಪತ್ರ ಶಾಖೆಗಳಲ್ಲಿ ತಾಂತ್ರಿಕ ಸ್ವರೂಪದ ಉದಾಹರಣೆ: ಡಾಟಾ ಎಂಟ್ರಿಯಂತಹ ಕಾರ್ಯಗಳನ್ನು ಹೊರಗುತ್ತಿಗೆ ನೌಕರರಿಂದ ನಿರ್ವಹಿಸಲಾಗುತ್ತಿದೆ. ಲೆಕ್ಕ ನಿರ್ವಹಣೆಯ ಅಧಿಕೃತ ಕೆಲಸಗಳನ್ನು ಹೊರಗುತ್ತಿಗೆ ನೌಕರರಿಗೆ ವಹಿಸಲು ಆಸ್ಪದವಿರುವುದಿಲ್ಲ. ಅಂತಹ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದರೆ, ಇಂತಹ ಕಛೇರಿಗಳ ಮೇಲುಸ್ತುವಾರಿಯನ್ನು ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಗಳು ನಿರ್ವಹಿಸುತ್ತಾರೆ. |
| ಹೊರಗುತ್ತಿಗೆ ನೌಕರರು ಕರ್ತವ್ಯದಲ್ಲಿ ತಪ್ಪು ಮಾಡಿದಲ್ಲಿ ಯಾವ ಸೇವಾ ನಿಯಮದಡಿ ಅಂತಹವರುಗಳ ವಿರುದ್ಧ ಕ್ರಮ ಕೈಗೊಳ್ಳಲಾಗುವುದು? | ಹೊರಗುತ್ತಿಗೆ ನೌಕರರು ಸರ್ಕಾರಿ ನೌಕರರಾಗಿರುವುದಿಲ್ಲ. ಆದಕಾರಣ, ಇವರ ವಿರುದ್ಧ ಸರ್ಕಾರಿ ನೌಕರರ ನಿಯಮಗಳನ್ನು ಅನ್ವಯಿಸಿ ಶಿಸ್ತು ಕ್ರಮಗಳನ್ನು ಕೈಗೊಳ್ಳಲಾಗುವುದಿಲ್ಲ.<br>ಆದರೆ, ಹೊರಗುತ್ತಿಗೆ ಏಜೆನ್ಸಿಯೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವ ಸಂದರ್ಭದಲ್ಲಿ, ಹೊರಗುತ್ತಿಗೆ ನೌಕರರ ಕರ್ತವ್ಯ ಹಾಗೂ ಜವಾಬ್ದಾರಿಗಳ ಬಗ್ಗೆ ಸೂಕ್ತ ನಿಬಂಧನೆಗಳು ಹಾಗೂ ಸೇವಾ ಷರತ್ತುಗಳನ್ನು ಅಳವಡಿಸಿಕೊಳ್ಳಲಾಗುತ್ತಿದೆ. |

ಸಂಖ್ಯೆ: ಇ- ಸಿಆಸುಇ 18 ಸೇನಿಡಿ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ:ಗ್ರಾಅಪ:01/1:ಆರ್‌ಆರ್‌ಸಿ:2020

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,ಬೆಂಗಳೂರು
ದಿನಾಂಕ:04.03.2020.

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

14
U/S
10/3/20

**ಇವರಿಗೆ:**
ಕಾರ್ಯದರ್ಶಿಗಳು,
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಕೊಠಡಿ ಸಂ:121, ಮೊದಲನೆ ಮಹಡಿ,
ವಿಧಾನ ಸೌಧ, ಬೆಂಗಳೂರು.

**ಮಾನ್ಯರೇ,**

**ವಿಷಯ:** ವಿಧಾನಸಭೆ ಸದಸ್ಯರು ರವರ ~~ಚುಕ್ಕೆ ಗುರುತಿನ~~/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 410ಗೆ ಉತ್ತರವನ್ನು ಒದಗಿಸುವ ಕುರಿತು.

***

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನಸಭೆ ~~ಚುಕ್ಕೆ ಗುರುತಿನ~~/ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 410ಗೆ ಉತ್ತರವನ್ನು ಸಿದ್ಧಪಡಿಸಿ 100 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಿದೆ.

ತಮ್ಮ ವಿಶ್ವಾಸಿ,

ಉಪ ನಿರ್ದೇಶಕರು (ಸುಗ್ರಾಯೋ) ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 410 |
| ಸದಸ್ಯರ ಹೆಸರು | ಶ್ರೀಮತಿ ಅಂಜಲಿ ಹೇಮಂತ್ ನಿಂಬಾಳ್ಕರ್ ಡಾ॥ (ಖಾನಾಪುರ) |
| ಉತ್ತರಿಸಬೇಕಾದ ದಿನಾಂಕ | 10.03.2020 |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ. | 2018-19ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ : 3054-80-196-1-03-300 ಲಮ್‌ಸಮ್ ವಿಶೇಷಾನುದಡಿಯಲ್ಲಿ ಕೈಗೊಂಡಿರುವ ಕಾಮಗಾರಿಗಳು ಹಣ ಬಿಡುಗಡೆಯಾಗದ ಕಾರಣ ಸ್ಥಗಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ. | ಸದರಿ ಲೆಕ್ಕ ಶೀರ್ಷಿಕೆಯಡಿ ಕಳೆದ ಸಾಲಿನಲ್ಲಿ ನೀಡಲಾಗಿದ್ದ ವಿಧಾನಸಭಾ ಕ್ಷೇತ್ರವಾರು ಮಂಜೂರಾದ ಮೊತ್ತವೆಷ್ಟು; ಈ ಪೈಕಿ ಈವರೆಗೆ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ; ತಡೆಹಿಡಿಯಲಾಗದ ಅನುದಾನದ ಮೊತ್ತವೆಷ್ಟು (ಸಂಪೂರ್ಣ ಮಾಹಿತಿಯನ್ನು ಜಿಲ್ಲಾವಾರು ಮತ್ತು ಕ್ಷೇತ್ರವಾರು ಒದಗಿಸುವುದು); | ವಿವರಗಳ ಸಂಪೂರ್ಣ ಮಾಹಿತಿಯನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ |
| ಇ | ಕಾಮಗಾರಿಗಳಿಗಾಗಿ ಹಣ ಬಿಡುಗಡೆ ಮಾಡದೆ ಅನುದಾನ ತಡೆಹಿಡಿಯಲು ಕಾರಣಗಳೇನು; ಈಗಾಗಲೇ ಮುಕ್ತಾಯ ಹಂತದಲ್ಲಿರುವ ಅನುದಾನ ತಡೆಹಿಡಿಯಲ್ಪಟ್ಟ ಕಾಮಗಾರಿಗಳಿಗೆ ಯಾವಾಗ ಬಿಡುಗಡೆ ಮಾಡಲಾಗುವುದು (ಮಾಹಿತಿ ಒದಗಿಸುವುದು)? | • ಆರ್ಥಿಕ ಲಭ್ಯತೆಯನ್ನ ಆಧಾರಿಸಿ ಎಲ್ಲಾ ಕ್ಷೇತ್ರಗಳಿಗೂ ಹಂಚಿಕೆ ಮಾಡುವ ಹಿನ್ನೆಲೆಯಲ್ಲಿ ಮಂಜೂರಾತಿ ನೀಡಿದ ಕಾಮಗಾರಿಗಳನ್ನು ತಡೆಹಿಡಿಯಲಾಗಿರುತ್ತದೆ.<br>• ತಡೆಹಿಡಿಯಲಾಗದ ರೂ.943.48 ಕೋಟಿಗಳ ಪೈಕಿ ಆರ್ಥಿಕ ಲಭ್ಯತೆಯನ್ನ ಆಧಾರಿಸಿ ಪ್ರಥಮ ಹಂತದಲ್ಲಿ ರೂ.517.87 ಕೋಟಿಗಳ ಕಾಮಗಾರಿಗಳನ್ನು ಮುಂದುವರೆಸಲಾಗಿದೆ. ವಿವರಗಳನ್ನು ಅನುಬಂಧ -1 ರಲ್ಲಿ ನೀಡಲಾಗಿದೆ. |

ಕಡತ ಸಂಖ್ಯೆ: ಗ್ರಾಅಪ: :ಆರ್‌ಆರ್‌ಸಿ:2020

(ಸಹಿ)

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

## ಅನುಬಂಧ – 1

## 2018-19ನೇ ಸಾಲಿನಲ್ಲಿ ಮಾನ್ಯ ಮುಖ್ಯಮಂತ್ರಿಗಳು / ಆರ್ಥಿಕ ಇಲಾಖೆಯು ಅನುಮೋದಿಸಿದಂತೆ ರಸ್ತೆ ಕಾಮಗಾರಿಗಳಿಗೆ ವಿಶೇಷ ಮಂಜೂರಾತಿ ನೀಡಿದ ಆದೇಶಗಳ ವಿವರಗಳು

(ರೂ. ಕೋಟಿಗಳಲ್ಲಿ)

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 1 | ಬಾಗಲಕೋಟೆ | ಶ್ರೀ ಸಿದ್ದರಾಮಯ್ಯ | ಬಾದಾಮಿ. | ಆಇ 588 ವೆಚ್ಚ-6 2018, ದಿ: 01.01.2019 | ಗ್ರಾಅಪ/05/06/ಆರ್‌ಆರ್‌ಸಿ/2019, ದಿ: 17.01.2019 ಗ್ರಾಅಪ/42/ಆರ್‌ಆರ್‌ಸಿ/2019 ಭಾ-1, ದಿ: 25.02.2016 | 10.00 | 0.00 | 10.00 | 10.00 | 0.00 |
| 2 | ಬಾಗಲಕೋಟೆ | ಶ್ರೀ ಸಿದ್ದರಾಮಯ್ಯ | ಬಾದಾಮಿ. | ಆಇ 218 ವೆಚ್ಚ-6 2019,ದಿ: 21.06.2019 | ಗ್ರಾಅಪ/42/5/ಆರ್‌ಆರ್‌ಸಿ/2019, ದಿ:18.12.2019 | 10.00 | 0.00 | 10.00 | 10.00 | 0.00 |
| 3 | ಬಾಗಲಕೋಟೆ | ಶ್ರೀ ಆನಂದ ಸಿದ್ದು ನ್ಯಾಮಗೌಡ | ಜಮಖಂಡಿ. | ಆಇ 542 ವೆಚ್ಚ-6 2018, ದಿ: 01.01.2019 | ಗ್ರಾಅಪ/6/16/ಆರ್‌ಆರ್‌ಸಿ/2019/ ದಿ:18.02.2019 ಗ್ರಾಅಪ/6/16(1)/ಆರ್‌ಆರ್‌ಸಿ/2019/ ದಿ:14.06.2019 | 7.00 | 0.00 | 7.00 | 2.00 | 5.00 |
| 4 | ಬಾಗಲಕೋಟೆ | ಶ್ರೀ ಗೋವಿಂದ ಎಂ ಕಾರಜೋಳ | ಮುಧೋಳ್ | ಆಇ: 116 ವೆಚ್ಚ-6:2019, ದಿ: 07.02.2019. | ಗ್ರಾಅಪ/30/4/ಆರ್‌ಆರ್‌ಸಿ/2019, ದಿ: 16.02.2019 | 3.00 | 0.00 | 3.00 | 3.00 | 0.00 |
| 5 | ಬಾಗಲಕೋಟೆ | ಶ್ರೀ ಆರ್.ಬಿ. ತಿಮ್ಮಾಪುರ, | ಮುಧೋಳ್ | ಆಇ/180/ವೆಚ್ಚ-6 2019, ದಿನಾಂಕ: 05.03.2019 | ಗ್ರಾಅಪ/60/ಆರ್‌ಆರ್‌ಸಿ/2019, ದಿ: 08.03.2019 | 5.00 | 0.00 | 5.00 | 5.00 | 0.00 |
| 6 | ಬೆಂಗಳೂರು ಗ್ರಾ | ಶ್ರೀ ಕೆ. ಶ್ರೀನಿವಾಸ ಮೂರ್ತಿ | ನೆಲಮಂಗಲ. | ಆಇ 567 ವೆಚ್ಚ-6 2018, ದಿ: 01.01.2019 | ಗ್ರಾಅಪ/5/13/ಆರ್‌ಆರ್‌ಸಿ/2019, 30.01.2019 ಗ್ರಾಅಪ/58/ಆರ್‌ಆರ್‌ಸಿ/2019, 08.03.2019 | 6.00 | 0.00 | 6.00 | 2.00 | 4.00 |
| 7 | ಬೆಂಗಳೂರು ಗ್ರಾ | ಶ್ರೀ ನಿಸರ್ಗ ನಾರಾಯಣ ಸ್ವಾಮಿ. ಎಲ್.ಎನ್ | ದೇವನಹಳ್ಳಿ. | ಆಇ 539 ವೆಚ್ಚ-6 2018, ದಿ: 01.01.2019 | ಗ್ರಾಅಪ/06/ಆರ್‌ಆರ್‌ಸಿ/2019, 16.01.2019 | 5.00 | 0.00 | 5.00 | 2.00 | 3.00 |
| 8 | ಬೆಂಗಳೂರು ಗ್ರಾ | ಶ್ರೀ ವೆಂಕಟರಮಣಯ್ಯ | ದೊಡ್ಡಬಳ್ಳಾಪುರ | ಆಇ: 105 ವೆಚ್ಚ-6:2019, ದಿ: 05.02.2019. | ಗ್ರಾಅಪ/30/13/ಆರ್‌ಆರ್‌ಸಿ/2019, 15.02.2019 ಗ್ರಾಅಪ/58/ಆರ್‌ಆರ್‌ಸಿ/2019,08.03.2019 | 5.00 | 5.00 | 0.00 | 0.00 | 0.00 |
| 9 | ಬೆಂಗಳೂರು ನಗರ | ಶ್ರೀ ಎಂ.ಟಿ.ಬಿ.ನಾಗರಾಜ್ | ಹೊಸಕೋಟೆ. | ಆಇ 560 ವೆಚ್ಚ-6 2018, ದಿ: 01.01.2019 | ಗ್ರಾಅಪ/06/07/ಆರ್‌ಆರ್‌ಸಿ/2019, 17.01.2019 | 5.00 | 0.00 | 5.00 | 5.00 | 0.00 |

| ಕ್ರ. ಸಂ. | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಆ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 10 | ಬೆಂಗಳೂರು ನಗರ | ಶ್ರೀ ಬಿ.ಶಿವಣ್ಣ | ಆನೇಕಲ್. | ಆಇ 562 ವೆಚ್ಚ-6 2018, ದಿ: 01.01.2019 | ಗ್ರಾಅಪ/6/12/ಆರ್‌ಆರ್‌ಸಿ/2019, 31.01.2019 ಗ್ರಾಅಪ/37/ಆರ್‌ಆರ್‌ಸಿ/2019, 25.02.2019 | 6.00 | 1.00 | 5.00 | 2.50 | 2.50 |
| 11 | ಬೆಂಗಳೂರು ನಗರ | ಶ್ರೀ ಎಸ್.ಟಿ.ಸೋಮಶೇಖರ್ | ಯಶವಂತಪುರ | ಆಇ 123 ವೆಚ್ಚ-6 2018, ದಿ: 08.02.2019 | ಗ್ರಾಅಪ/33/4/ಆರ್‌ಆರ್‌ಸಿ/2019, 20.02.2019 ಗ್ರಾಅಪ/46/ಆರ್‌ಆರ್‌ಸಿ/2019, 28.02.2019 | 7.00 | 1.00 | 6.00 | 7.00 | -1.00 |
| 12 | ಬೆಂಗಳೂರು ನಗರ | ಶ್ರೀ ಆರ್. ಮಂಜುನಾಥ್ | ದಾಸರಹಳ್ಳಿ | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/48/8/ಆರ್‌ಆರ್‌ಸಿ/2019, 26.02.2019 | 3.00 | 0.00 | 3.00 | 0.00 | 3.00 |
| 13 | ಬೆಂಗಳೂರು ನಗರ | ಶ್ರೀ ಅರವಿಂದ ಲಿಂಬಾವಳಿ ಮಹಾದೇವಪುರ | ಮಹದೇವಪುರ. | ಆಇ/197/ವೆಚ್ಚ-6/2019, ದಿನಾಂಕ: 06.03.2019 | ಗ್ರಾಅಪ/64/8/ಆರ್‌ಆರ್‌ಸಿ/2019, 08.03.2019 | 2.00 | 0.00 | 2.00 | 2.00 | 0.00 |
| 14 | ಬೆಳಗಾವಿ | ಶ್ರೀ ಮಹಾಂತೇಶ ಎಸ್ ಕೌಜಲಗಿ | ಬೈಲಹೊಂಗಲ | ಆಇ 578 ವೆಚ್ಚ-6 2018, ದಿ: 01.01.2019 | ಗ್ರಾಅಪ/04/01/ಆರ್‌ಆರ್‌ಸಿ/2019/ ದಿ:16.01.2019 | 8.00 | 0.00 | 8.00 | 5.60 | 2.40 |
| 15 | ಬೆಳಗಾವಿ | ಶ್ರೀಮತಿ ಲಕ್ಷ್ಮಿ ಹೆಬ್ಬಾಳ್ಕರ್ | ಬೆಳಗಾವಿ ಗ್ರಾ | ಆಇ 571 ವೆಚ್ಚ-6 2018, ದಿ: 01.01.2019 | ಗ್ರಾಅಪ/04/09/ಆರ್‌ಆರ್‌ಸಿ/2019/ ದಿ:17.01.2019 | 8.00 | 0.00 | 8.00 | 6.25 | 1.75 |
| 16 | ಬೆಳಗಾವಿ | ಶ್ರೀ ಗಣೇಶ ಪ್ರಕಾಶ ಹುಕ್ಕೇರಿ | ಚಿಕ್ಕೋಡಿ-ಸದಲಗ | ಆಇ 553 ವೆಚ್ಚ-6 2018, ದಿ: 01.01.2019 | ಗ್ರಾಅಪ/06/03/ಆರ್‌ಆರ್‌ಸಿ/2019 ದಿ:17.01.2019 | 8.00 | 0.00 | 8.00 | 8.00 | 0.00 |
| 17 | ಬೆಳಗಾವಿ | ಶ್ರೀ ಗಣೇಶ ಪ್ರಕಾಶ ಹುಕ್ಕೇರಿ | ಅಥಣಿ, ಹುಕ್ಕೇರಿ, ರಾಯಬಾಗ, ಚಿಕ್ಕೋಡಿ ತಾ|| | ಆಇ/185/ವೆಚ್ಚ-6/2018, ದಿನಾಂಕ: 05.03.2019 | ಗ್ರಾಅಪ/63/2/ಆರ್‌ಆರ್‌ಸಿ/2019, 08.03.2019 | 10.00 | 0.00 | 10.00 | 10.00 | 0.00 |
| 18 | ಬೆಳಗಾವಿ | ಶ್ರೀ ಶ್ರೀಮಂತ ಬಾಳಸಾಹೇಬ ಪಾಟೀಲ್ | ಕಾಗವಾಡ | ಆಇ 552 ವೆಚ್ಚ-6 2018, ದಿ: 01.01.2019 | ಗ್ರಾಅಪ/06/06/ಆರ್‌ಆರ್‌ಸಿ/2019/ ದಿ:16.01.2019 ಗ್ರಾಅಪ/06/06/ಆರ್‌ಆರ್‌ಸಿ/2019/ ದಿ: 05.02.2019 | 8.00 | 0.00 | 8.00 | 8.00 | 0.00 |
| 19 | ಬೆಳಗಾವಿ | ಶ್ರೀ ಮಹೇಶ ಈರನಗೌಡ ಕುಮಠಳ್ಳಿ | ಅಥಣಿ | ಆಇ 543 ವೆಚ್ಚ-6 2018, ದಿ: 01.01.2019 | ಗ್ರಾಅಪ/06/01/ಆರ್‌ಆರ್‌ಸಿ/2019/ ದಿ:03.06.2019 ಗ್ರಾಅಪ/6/1(1)/ಆರ್‌ಆರ್‌ಸಿ/2019/ ದಿ:21.06.2019 | 7.00 | 0.00 | 7.00 | 7.00 | 0.00 |
| 20 | ಬೆಳಗಾವಿ | ಶ್ರೀ ಸತೀಶ್ ಜಾರಕಿಹೊಳಿ | ಬೆಳಗಾವಿ & ಹುಕ್ಕೇರಿ (ಯಮಕನಮರಡಿ) | ಆಇ 423 ವೆಚ್ಚ-6 2018 17.12.2018 | ಗ್ರಾಅಪ/21/ಆರ್‌ಆರ್‌ಸಿ/2019, 24.01.2019 | 8.00 | 0.00 | 8.00 | 4.85 | 3.15 |

| ಕ್ರ ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಆ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 21 | ಬೆಳಗಾವಿ | ಶ್ರೀ ಚಂದ್ರಶೇಖರ ಮಾಮನಿ | ಸವದತ್ತಿ | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/48/11/ಆರ್‌ಆರ್‌ಸಿ/2019, 01.03.2019 | 2.00 | 0.00 | 2.00 | 2.00 | 0.00 |
| 22 | ಬೆಳಗಾವಿ | ಶ್ರೀ ದೊಡಗೌಡ ಮಹಾಂತೇಶ | ಕಿತ್ತೂರು | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/48/ಆರ್‌ಆರ್‌ಸಿ/2019, 26.02.2019 | 3.00 | 0.00 | 3.00 | 3.00 | 0.00 |
| 23 | ಬೆಳಗಾವಿ | ಶ್ರೀಮತಿ ಶಶಿಕಲಾ ಅ ಜೊಲ್ಲೆ | ನಿಪ್ಪಾಣಿ | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/48/4/ಆರ್‌ಆರ್‌ಸಿ/2019, 26.02.2019 | 2.00 | 0.00 | 2.00 | 2.00 | 0.00 |
| 24 | ಬೆಳಗಾವಿ | ಶ್ರೀ ಮಹಾದೇವಪ್ಪ ಎಸ್ ಯಾದವಾಡ, ಶಾಸಕರು | ರಾಮದುರ್ಗ | ಆಇ 399 ವೆಚ್ಚ-6 2018, ದಿ: 12.07.2019 | ಗ್ರಾಅಪ/47/4/ಆರ್‌ಆರ್‌ಸಿ/2019, ದಿ:19.07.2019 | 2.00 | 0.00 | 2.00 | 2.00 | 0.00 |
| 25 | ಬೆಳಗಾವಿ | ಡಾ|| ಅಂಜಲಿ ಹೇಮಂತ್ ನಿಂಬಾಳ್ಕರ್ | ಖಾನಾಪುರ | ಆಇ 555 ವೆಚ್ಚ-6 2018, ದಿ: 01.01.2019 | ಗ್ರಾಅಪ/5/14/ಆರ್‌ಆರ್‌ಸಿ/2019, 21.01.2019 | 6.00 | 0.00 | 6.00 | 0.00 | 6.00 |
| 26 | ಬೆಳಗಾವಿ | ಶ್ರೀ ಗಣೇಶ್ ಪ್ರಕಾಶ್ ಹುಕ್ಕೇರಿ, | ಚಿಕ್ಕೋಡಿ-ಸದಲಗ | ಆಇ 364 ವೆಚ್ಚ-6 2019, ದಿ: 12.07.2019 | ಕಾಮಗಾರಿ ಪಟ್ಟಿ ನೀಡಿರ ಗ್ರುದಿಲ್ಲ | 12.00 | 0.00 | 12.00 | 0.00 | 12.00 |
| 27 | ಬೆಳಗಾವಿ | ಶ್ರೀ ಮಹಾಂತೇಶ ಕವಟಗಿಮಠ | ಅಥಣಿ (ನಿಪ್ಪಾಣಿ ಖಾನಾಪುರ/ಬೈಲಹೊಂಗಲ) | ಆಇ/197/ವೆಚ್ಚ-6/2019, ದಿನಾಂಕ: 06.03.2019 | ಗ್ರಾಅಪ/63/10/ಆರ್‌ಆರ್‌ಸಿ/2019, 08.03.2019 | 1.00 | 0.00 | 1.00 | 0.00 | 1.00 |
| 28 | ಬೆಳಗಾವಿ | ಶ್ರೀ ಶಂಕರ ಭ. ಮಾಡಲಗಿ, | ಬೈಲಹೊಂಗಲ | ಆಇ 218 ವೆಚ್ಚ-6 2019,ದಿ: 21.06.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 2.00 | 0.00 | 2.00 | 0.00 | 2.00 |
| 29 | ಬಳ್ಳಾರಿ | ಶ್ರೀ ವಿ.ಎಸ್. ಉಗ್ರಪ್ಪ | ಕಂಪ್ಲಿ, ಬಳ್ಳಾರಿ | ಆಇ 592 ವೆಚ್ಚ-6 2018, ದಿ: 01.01.2019 | ಗ್ರಾಅಪ/4/22/ಆರ್‌ಆರ್‌ಸಿ/2019, 08.03.2019 | 6.00 | 0.00 | 6.00 | 6.00 | 0.00 |
| 30 | ಬಳ್ಳಾರಿ | ಶ್ರೀ ಬಿ. ನಾಗೇಂದ್ರ | ಬಳಾರಿ ಗ್ರಾ. | ಆಇ 579 ವೆಚ್ಚ-6 2018, ದಿ: 01.01.2019 | ಗ್ರಾಅಪ/57/ಆರ್‌ಆರ್‌ಸಿ/2019, 20.06.2019 | 8.00 | 0.00 | 8.00 | 2.50 | 5.50 |
| 31 | ಬಳ್ಳಾರಿ | ಶ್ರೀ ಆನಂದ ಸಿಂಗ್ | ವಿಜಯನಗರ, | ಆಇ 535 ವೆಚ್ಚ-6 2018, ದಿ: 01.01.2019 | ಗ್ರಾಅಪ/05/18/ಆರ್‌ಆರ್‌ಸಿ/2019, 23.02.2019 | 7.00 | 0.00 | 7.00 | 7.00 | 0.00 |
| 32 | ಬಳ್ಳಾರಿ | ಶ್ರೀ ಪಿ.ಟಿ. ಪರಮೇಶ್ವರ ನಾಯಕ | ಹಡಗಲಿ, | ಆಇ 536 ವೆಚ್ಚ-6 2018, ದಿ: 02.01.2019 | ಗ್ರಾಅಪ/05/03/ಆರ್‌ಆರ್‌ಸಿ/2019, 16.01.2019 | 7.00 | 0.00 | 7.00 | 2.00 | 5.00 |
| 33 | ಬಳ್ಳಾರಿ | ಶ್ರೀ ಭೀಮಾನಾಯ್ಕ, ಎಸ್ | ಹಗರಿಬೊಮ್ಮನ ಹಳ್ಳಿ, | ಆಇ 537 ವೆಚ್ಚ-6 2018, ದಿ: 01.01.2019 | ಗ್ರಾಅಪ/5/17/ಆರ್‌ಆರ್‌ಸಿ/2019, 16.02.2019 | 7.00 | 0.00 | 7.00 | 3.00 | 4.00 |

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ, & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 34 | ಬಳ್ಳಾರಿ | ಶ್ರೀ ಜೆ.ಎನ್ ಗಣೇಶ್, ಶಾಸಕರು, | ಕಂಪ್ಲಿ, ಬಳ್ಳಾರಿ | ಆಇ 399 ವೆಚ್ಚ-6 2019, ದಿ: 12.07.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 8.00 | 0.00 | 8.00 | 0.00 | 8.00 |
| 35 | ಬೀದರ್ | ಶ್ರೀ ರಹೀಂ ಖಾನ್ | ಬೀದರ್ | ಆಇ 570 ವೆಚ್ಚ-6 2018, ದಿ: 01.01.2019 | ಗ್ರಾಅಪ/04/19/ಆರ್‌ಆರ್‌ಸಿ/2019, 05.02.2019 | 6.00 | 0.00 | 6.00 | 5.00 | 1.00 |
| 36 | ಬೀದರ್ | ಶ್ರೀ ಬಿ. ನಾರಾಯಣ ರಾವ್, | ಬಸವಕಲ್ಯಾಣ | ಆಇ 28 ವೆಚ್ಚ-6 2018, ದಿ: 11.01.2019 | ಗ್ರಾಅಪ/15/5/ಆರ್‌ಆರ್‌ಸಿ/2019, 12.02.2019 | 7.00 | 0.00 | 7.00 | 3.50 | 3.50 |
| 37 | ಬೀದರ್ | ಶ್ರೀ ಪ್ರಭು ಬಿ ಚೌವ್ಹಾಣ್ | ಔರಾದ್ | ಆಇ: 104 ವೆಚ್ಚ-6:2019, ದಿ: 05.02.2019. | ಗ್ರಾಅಪ/30/5/ಆರ್‌ಆರ್‌ಸಿ/2019, 01.03.2019 | 3.00 | 0.00 | 3.00 | 3.00 | 0.00 |
| 38 | ಬೀದರ್ | ಶ್ರೀ ಈಶ್ವರ ಬಿ. ಖಂಡ್ರೆ | ಬಾಲ್ಕಿ, | ಆಇ 583 ವೆಚ್ಚ-6 2018, ದಿ: 01.01.2019 | ಗ್ರಾಅಪ/36/ಆರ್‌ಆರ್‌ಸಿ/2019, 18.02.2019<br>ಗ್ರಾಅಪ/36(1)/ಆರ್‌ಆರ್‌ಸಿ/2019, 23.02.2019 | 10.00 | 0.00 | 10.00 | 0.00 | 10.00 |
| 39 | ಬೀದರ್ | ಶ್ರೀ ರಾಜಶೇಖರ ಬಿ.ಪಾಟೀಲ, | ಹುಮನಾಬಾದ್ | ಆಇ 38 ವೆಚ್ಚ-6 2019 ದಿ 19.01.2019 | ಗ್ರಾಅಪ/20/1/ಆರ್‌ಆರ್‌ಸಿ/2019, 24.01.2019 | 5.00 | 0.00 | 5.00 | 0.00 | 5.00 |
| 40 | ವಿಜಯಪುರ | ಶ್ರೀ ಯಶವಂತರಾಯಗೌಡ ಪಾಟೀಲ | ಇಂಡಿ, | ಆಇ 559 ವೆಚ್ಚ-6 2018, ದಿ: 01.01.2019 | ಗ್ರಾಅಪ/05/04/ಆರ್‌ಆರ್‌ಸಿ/2019, 17.01.2019 | 5.00 | 0.00 | 5.00 | 1.60 | 3.40 |
| 41 | ವಿಜಯಪುರ | ಶ್ರೀ ಎಂ.ಸಿ ಮನಗೂಳಿ, | ಸಿಂಧಗಿ | ಆಇ 23 ವೆಚ್ಚ-6 2018, ದಿ: 11.01.2019 | ಗ್ರಾಅಪ/15/2/ಆರ್‌ಆರ್‌ಸಿ/2019, 24.01.2019 | 7.00 | 0.00 | 7.00 | 2.00 | 5.00 |
| 42 | ವಿಜಯಪುರ | ಶ್ರೀ ಎಂ.ಬಿ.ಪಾಟೀಲ್, ಗೃಹ ಸಚಿವರು | ಬಬಲೇಶ್ವರ | ಆಇ 40 ವೆಚ್ಚ-6 2019 ದಿ 19.01.2019 | ಗ್ರಾಅಪ/20/4/ಆರ್‌ಆರ್‌ಸಿ/2019, 10.02.2019<br>ಗ್ರಾಅಪ/04/ಆರ್‌ಆರ್‌ಸಿ/2019, 11.02.2019 | 8.00 | 0.00 | 8.00 | 2.50 | 5.50 |
| 43 | ವಿಜಯಪುರ | ಶ್ರೀ ಸೋಮನಗೌಡ ಬಿ. ಪಾಟೀಲ್ | ದೇವರಹಿಪ್ಪರಗಿ | ಆಇ 218 ವೆಚ್ಚ-6 2019,ದಿ: 21.06.2019 | ಗ್ರಾಅಪ:42/ಆರ್‌ಆರ್‌ಸಿ:2019 ದಿನಾಂಕ: 22.11.2019 | 2.00 | 0.00 | 2.00 | 2.00 | 0.00 |
| 44 | ವಿಜಯಪುರ | ಶ್ರೀ ದೇವಾನಂದ ಫೂಲಸಿಂಗ್ ಚವ್ಹಾಣ್ | ನಾಗಠಾಣ | ಆಇ 547 ವೆಚ್ಚ-6 2018, ದಿ: 01.01.2019 | ಗ್ರಾಅಪ/04/ಆರ್‌ಆರ್‌ಸಿ/2019, 16.01.2019<br>ಗ್ರಾಅಪ/42/ಆರ್‌ಆರ್‌ಸಿ/2019 (ಭಾ-1), 25.02.2019<br>ಗ್ರಾಅಪ/58/ಆರ್‌ಆರ್‌ಸಿ/2019, 08.03.2019 | 9.00 | 0.00 | 9.00 | 0.00 | 9.00 |

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 45 | ವಿಜಯಪುರ | ಶ್ರೀ ಶಿವಾನಂದ, ಎಸ್ ಪಾಟೀಲ್, | ಬ.ಬಾಗೇವಾಡಿ | ಆಇ 26 ವೆಚ್ಚ-6 2018, ದಿ: 11.01.2019 | ಗ್ರಾಅಪ/15/1/ಆರ್‌ಆರ್‌ಸಿ/2019, 21.01.2019<br>ಗ್ರಾಅಪ/30/ಆರ್‌ಆರ್‌ಸಿ/2019, 19.02.2019 | 7.00 | 0.00 | 7.00 | 0.00 | 7.00 |
| 46 | ಚಾಮರಾಜನಗರ | ಶ್ರೀ ಆರ್. ನರೇಂದ್ರ | ಹನೂರು, ಚಾಮರಾಜನಗರ | ಆಇ 569 ವೆಚ್ಚ-6 2018, ದಿ: 01.01.2019 | ಗ್ರಾಅಪ/6/4/ಆರ್‌ಆರ್‌ಸಿ/2019, 21.01.2019<br>ಗ್ರಾಅಪ/58/ಆರ್‌ಆರ್‌ಸಿ/2019,08.03.2019 | 6.00 | 0.00 | 6.00 | 2.00 | 4.00 |
| 47 | ಚಾಮರಾಜನಗರ | ಶ್ರೀ ಎನ್. ಮಹೇಶ್ | ಕೊಳ್ಳೇಗಾಲ, ಚಾಮರಾಜನಗರ | ಆಇ 557 ವೆಚ್ಚ-6 2018, ದಿ: 01.01.2019 (ರೂ.6.00 ಕೋಟಿಗಳು ಒಟ್ಟು ಆದೇಶವಾಗಿರುತ್ತದೆ) | ಗ್ರಾಅಪ/5/15/ಆರ್‌ಆರ್‌ಸಿ/2019, 24.01.2019 | 2.00 | 0.00 | 2.00 | 2.00 | 0.00 |
| 48 | ಚಾಮರಾಜನಗರ | ಶ್ರೀ ಸಿ.ಎಸ್ ನಿರಂಜನ್‌ಕುಮಾರ್ | ಗುಂಡ್ಲುಪೇಟೆ | ಆಇ 119 ವೆಚ್ಚ-6 2019, ದಿ: 07.02.2019. | ಗ್ರಾಅಪ/30/ಆರ್‌ಆರ್‌ಸಿ/2019,14.02.2019<br>ಗ್ರಾಅಪ/30(1)/ಆರ್‌ಆರ್‌ಸಿ/2019,17.06.2019 | 3.00 | 0.00 | 3.00 | 3.00 | 0.00 |
| 49 | ಚಾಮರಾಜನಗರ | ಶ್ರೀ ಸಿ. ಪುಟ್ಟರಂಗಶೆಟ್ಟಿ, | ಚಾಮರಾಜನಗರ ವಿಧಾನಸಭಾ ಕ್ಷೇತ್ರ | ಆಇ/181/ವೆಚ್ಚ-6/2019, ದಿನಾಂಕ: 05.03.2019 | ಗ್ರಾಅಪ/63/4/ಆರ್‌ಆರ್‌ಸಿ/2019,08.03.2019 | 7.00 | 0.00 | 7.00 | 2.00 | 5.00 |
| 50 | ಚಾಮರಾಜನಗರ | ಶ್ರೀ ಎನ್. ಮಹೇಶ್ | ಕೊಳ್ಳೇಗಾಲ, ಚಾಮರಾಜನಗರ | ಆಇ 557 ವೆಚ್ಚ-6 2018, ದಿ: 01.01.2019 (ರೂ.6.00 ಕೋಟಿಗಳು ಒಟ್ಟು ಆದೇಶವಾಗಿರುತ್ತದೆ ಅದರಲ್ಲಿ ರೂ. 2.00 ಕೋಟಿಗಳು ಪ್ರಥಮ ಹಂತದಲ್ಲಿ ಮಿತಿಗೊಳಿಸಿ ಆದೇಶಿಸಲಾಗಿದೆ) | ಗ್ರಾಅಪ/5/15/ಆರ್‌ಆರ್‌ಸಿ/2019, 24.01.2019 | 4.00 | 0.00 | 4.00 | 4.00 | 0.00 |
| 51 | ಚಾಮರಾಜನಗರ | ಶ್ರೀ ಆರ್. ಧ್ರುವನಾರಾಯಣ, ಲೋಕಸಭಾ ಸದಸ್ಯರು, ಹೆಚ್.ಡಿ ಕೋಟೆ | ಚಾಮರಾಜನಗರ ಲೋಕಸಭಾ ಕ್ಷೇತ್ರದ ಹೆಚ್.ಡಿ.ಕೋಟೆ ತಾಲ್ಲೂಕು | ಆಇ/184/ವೆಚ್ಚ-6/2019, ದಿನಾಂಕ: 05.03.2019 | ಗ್ರಾಅಪ/63/6/ಆರ್‌ಆರ್‌ಸಿ/2019, 08.03.2019 | 1.00 | 0.00 | 1.00 | 0.00 | 1.00 |

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 52 | ಚಿಕ್ಕಬಳ್ಳಾಪುರ | ಶ್ರೀ ಎಸ್.ಎನ್ ಸುಬ್ಬಾರೆಡ್ಡಿ | ಬಾಗೇಪಲ್ಲಿ, ಚಿಕ್ಕಬಳ್ಳಾಪುರ | ಆಇ 593 ವೆಚ್ಚ-6 2018, ದಿ: 01.01.2019 | ಗ್ರಾಅಪ/04/7/ಆರ್‌ಆರ್‌ಸಿ/2019,16.01.2019 | 6.00 | 0.00 | 6.00 | 3.00 | 3.00 |
| 53 | ಚಿಕ್ಕಬಳ್ಳಾಪುರ | ಶ್ರೀ ಎಂ.ಕೃಷ್ಣರೆಡ್ಡಿ | ಚಿಂತಾಮಣಿ, ಚಿಕ್ಕಬಳ್ಳಪುರ | ಆಇ 582 ವೆಚ್ಚ-6 2018, ದಿ: 01.01.2019 | ಗ್ರಾಅಪ/05/2/ಆರ್‌ಆರ್‌ಸಿ/2019,16.01.2019 | 10.00 | 0.00 | 10.00 | 3.00 | 7.00 |
| 54 | ಚಿಕ್ಕಬಳ್ಳಾಪುರ | ಶ್ರೀ ಕೆ.ಸುಧಾಕರ | ಚಿಕ್ಕಬಳಾಪುರ,ಚಿಕ್ಕಬಳ್ಳಾಪುರ | ಆಇ 549 ವೆಚ್ಚ-6 2018, ದಿ: 01.01.2019 | ಗ್ರಾಅಪ/06/09/ಆರ್‌ಆರ್‌ಸಿ/2019,16.01.2019 | 10.00 | 0.00 | 10.00 | 10.00 | 0.00 |
| 55 | ಚಿಕ್ಕಬಳ್ಳಾಪುರ | ಶ್ರೀ ವಿ.ಮುನಿಯಪ್ಪ | ಶಿಡ್ಲಘಟ್ಟ, ಚಿಕ್ಕಬಳ್ಳಾಪುರ | ಆಇ 541 ವೆಚ್ಚ-6 2018, ದಿ: 01.01.2019 | ಗ್ರಾಅಪ/06/4/ಆರ್‌ಆರ್‌ಸಿ/2019,16.01.2019<br>ಗ್ರಾಅಪ/6/4(1)/ಆರ್‌ಆರ್‌ಸಿ/2019,21.01.2019 | 7.00 | 0.00 | 7.00 | 2.00 | 5.00 |
| 56 | ಚಿಕ್ಕಬಳ್ಳಾಪುರ | ಶ್ರೀ ಎನ್. ಹೆಚ್. ಶಿವಶಂಕರ ರೆಡ್ಡಿ | ಗೌರಿಬಿದನೂರು | ಆಇ 129 ವೆಚ್ಚ-6 2019 ದಿ:11.02.2019 | ಗ್ರಾಅಪ/36/1/ಆರ್‌ಆರ್‌ಸಿ/2019, 22.02.2019<br>ಗ್ರಾಅಪ/36/1/ಆರ್‌ಆರ್‌ಸಿ/2019, (ಭಾ-1) 06.03.2019 | 6.00 | 0.00 | 6.00 | 2.50 | 3.50 |
| 57 | ಚಿಕ್ಕಬಳ್ಳಾಪುರ | ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ ಆಗ್ನೇಯ ಪದವೀಧರ ಕ್ಷೇತ್ರ | ಕೋಲಾರ, ಚಿಕ್ಕಬಳ್ಳಾಪುರ (ಚಿತ್ರದುರ್ಗ ಹಿರಿಯೂರು, ಶ್ರೀನಿವಾಸಪುರ | ಆಇ/198/ವೆಚ್ಚ-6/2019, ದಿನಾಂಕ: 06.03.2019 | ಗ್ರಾಅಪ/64/1 (1) /ಆರ್‌ಆರ್‌ಸಿ/201.. ದಿ: 08.03.2019<br>ಗ್ರಾಅಪ/64/1 ಆರ್‌ಆರ್‌ಸಿ/2019, ದಿ: 08.03.2019 | 3.00 | 0.00 | 3.00 | 0.00 | 3.00 |
| 58 | ಚಿಕ್ಕಬಳ್ಳಾಪುರ | ಶ್ರೀ ಎಸ್.ಎನ್ ಸುಬ್ಬಾರೆಡ್ಡಿ | ಬಾಗೇಪಲ್ಲಿ | ಆಇ 218 ವೆಚ್ಚ-6 2019,ದಿ: 21.06.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 5.00 | 0.00 | 5.00 | 0.00 | 5.00 |
| 59 | ಚಿಕ್ಕಮಗಳೂರು | ಶ್ರೀ ಟಿ.ಡಿ ರಾಜೇಗೌಡ | ಶೃಂಗೇರಿ, ಚಿಕ್ಕಮಗಳೂರು | ಆಇ 568 ವೆಚ್ಚ-6 2018, ದಿ: 01.01.2019 | ಗ್ರಾಅಪ/04/06/ಆರ್‌ಆರ್‌ಸಿ/2019,16.01.2019 | 6.00 | 0.00 | 6.00 | 2.25 | 3.75 |
| 60 | ಚಿಕ್ಕಮಗಳೂರು | ಶ್ರೀ ಪ್ರಾಣೇಶ್ ಚಿಕ್ಕಮಗಳೂರು ವಿ.ಪ.ಸದಸ್ಯರು | ಚಿಕ್ಕಮಗಳೂರು ಮೂಡಿಗೆರೆ | ಆಇ/197/ವೆಚ್ಚ-6/2018, ದಿನಾಂಕ: 06.03.2019 | ಗ್ರಾಅಪ/64/6/ಆರ್‌ಆರ್‌ಸಿ/2019, 08.03.2019<br>ಗ್ರಾಅಪ/64/6/1/ಆರ್‌ಆರ್‌ಸಿ/2019, 24.04.2019 | 1.00 | 0.00 | 1.00 | 1.00 | 0.00 |
| 61 | ಚಿತ್ರದುರ್ಗ | ಶ್ರೀ ಟಿ. ರಘುಮೂರ್ತಿ | ಚಳ್ಳಕೆರೆ, ಚಿತ್ರದುರ್ಗ | ಆಇ 595 ವೆಚ್ಚ-6 2018, ದಿ: 01.01.2019 | ಗ್ರಾಅಪ/06/15/ಆರ್‌ಆರ್‌ಸಿ/2019,11.02.2019<br>ಗ್ರಾಅಪ/58/ಆರ್‌ಆರ್‌ಸಿ/2019, 08.03.2019 | 6.00 | 0.00 | 6.00 | 2.00 | 4.00 |
| 62 | ಚಿತ್ರದುರ್ಗ | ಶ್ರೀಮತಿ ಪೂರ್ಣಿಮಾ | ಹಿರಿಯೂರು | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/57/2/ಆರ್‌ಆರ್‌ಸಿ/2019, 21.06.2019 | 2.00 | 0.00 | 2.00 | 2.00 | 0.00 |

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ತೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 63 | ದಕ್ಷಿಣ ಕನ್ನಡ | ಶ್ರೀ ಯು.ಟಿ ಖಾದರ್, | ಮಂಗಳೂರು | ಆಇ 29 ವೆಚ್ಚ-6 2018, ದಿ: 11.01.2019 | ಗ್ರಾಅಪ/15/6/ಆರ್‌ಆರ್‌ಸಿ/2019, 20.02.2019 ಗ್ರಾಅಪ/15/6(1)/ಆರ್‌ಆ ಸಿ/2019, 20.02.2019 | 10.00 | 0.00 | 10.00 | 10.00 | 0.00 |
| 64 | ದಕ್ಷಿಣ ಕನ್ನಡ | ಶ್ರೀ ಎಸ್. ಅಂಗಾರ | ಸುಳ್ಯ | ಆಇ: 107 ವೆಚ್ಚ-6:2019, ದಿ: 05.02.2019 | ಗ್ರಾಅಪ/30/10/ಆರ್‌ಆರ್‌ಸಿ/2019, ದಿ:20.02.2019 | 3.00 | 0.00 | 3.00 | 3.00 | 0.00 |
| 65 | ದಾವಣಗೆರೆ | ಶ್ರೀ ಎಸ್.ವಿ ರಾಮಚಂದ್ರ | ಜಗಳೂರು | ಆಇ: 116 ವೆಚ್ಚ-6:2019, ದಿ: 07.02.2019 | ಗ್ರಾಅಪ/30/3/ಆರ್‌ಆರ್‌ಸಿ/2019, 15.02.2019 | 2.00 | 0.00 | 2.00 | 2.00 | 0.00 |
| 66 | ದಾವಣಗೆರೆ | ಶ್ರೀ ಕೆ. ಮಾಡಾಳ್ ವಿರೂಪಾಕ್ಷಪ್ಪ | ಚನ್ನಗಿರಿ | ಆಇ: 101 ವೆಚ್ಚ-6:2019, ದಿ: 05.02.2019. | ಗ್ರಾಅಪ/29/ಆರ್‌ಆರ್‌ಸಿ/2019, 16.02.2019 | 2.00 | 0.00 | 2.00 | 2.00 | 0.00 |
| 67 | ದಾವಣಗೆರೆ | ಶ್ರೀ ಎನ್. ಲಿಂಗಣ್ಣ, ಶಾಸಕರು | ಮಾಯಕೊಂಡ | ಆಇ 144 ವೆಚ್ಚ-6 2019, ದಿ: 14.02.2019 | (1) ಗ್ರಾಅಪ/39/ಆರ್‌ಆರ್‌ಸಿ/2019, 01.03.2019 (2) ಗ್ರಾಅಪ/39/1/ಆರ್‌ಆರ್‌ಸಿ/2019, 08.03.2019 | 2.00 | 0.00 | 2.00 | 2.00 | 0.00 |
| 68 | ದಾವಣಗೆರೆ | ಶ್ರೀ ಶಾಮನೂರು ಶಿವಶಂಕರಪ್ಪ | ದಾವಣಗೆರೆ ದಕ್ಷಿಣ | ಆಇ:79:ವೆಚ್ಚ-6:2019, ದಿ:30.01.2019. | ಗ್ರಾಅಪ/27/1/ಆರ್‌ಆರ್‌ಸಿ/2019, 18.02.2019 | 8.00 | 0.00 | 8.00 | 0.00 | 8.00 |
| 69 | ದಾವಣಗೆರೆ | ಶ್ರೀ ಆನಗೋಡ ಜಯಸಿಂಹ ಜಗಳೂರು ಕೆ.ಪಿ.ಸಿ.ಸಿ. ಕಾರ್ಯದರ್ಶಿ | ಜಗಳೂರು | ಆಇ/197/ವೆಚ್ಚ-6/2019, ದಿನಾಂಕ: 06.03.2019 | ಗ್ರಾಅಪ/63/9/ಆರ್‌ಆರ್‌ಸಿ/2019, 08.03.2019 | 0.20 | 0.00 | 0.20 | 0.00 | 0.20 |
| 70 | ದಾವಣಗೆರೆ | ಶ್ರೀ ಎಸ್.ಎ.ರವೀಂದ್ರನಾಥ್ | ದಾವಣಗೆರೆ ಉತ್ತರ | ಆಇ: 106 ವೆಚ್ಚ-6:2019, ದಿ: 05.02.2019 | ಗ್ರಾಅಪ/30/9/ಆರ್‌ಆರ್‌ಸಿ/2019, 20.02.2019 | 2.00 | 0.00 | 2.00 | 0.00 | 2.00 |
| 71 | ದಾವಣಗೆರೆ | ಶ್ರೀ ಕೆ.ಶಿವಲಿಂಗಪ್ಪ, ಪ್ರಧಾನ ಕಾರ್ಯದರ್ಶಿ, ದಾವಣಗೆರೆ ಜಿಲ್ಲಾ ಕಾಂಗ್ರೆಸ್ (ಮಾನ್ಯ ಉಪ ಮುಖ್ಯಮಂತ್ರಿಗಳು ಉಲ್ಲೇಖದ) | ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕು | ಆಇ/334/ವೆಚ್ಚ-6/2019, ದಿನಾಂಕ: 01.04.2019 | ಗ್ರಾಅಪ/39/4/ಆರ್‌ಆರ್‌ಸಿ/2019, 27.05.2019 | 5.00 | 0.00 | 5.00 | 0.00 | 5.00 |
| 72 | ಧಾರವಾಡ | ಶ್ರೀ ಚನ್ನಬಸಪ್ಪ ಎಸ್.ಶಿವಳ್ಳಿ, | ಕುಂದಗೋಳ | ಆಇ 45 ವೆಚ್ಚ-6 2019 ದಿ 19.01.2019 | ಗ್ರಾಅಪ/20/5/ಆರ್‌ಆರ್‌ಸಿ/2019, 11.02.2019 | 6.00 | 0.00 | 6.00 | 3.50 | 2.50 |

| ಕ್ರ. ಸಂ | ಜಿಲ್ಲೆಯ ಹೆಸರು | ಶಾಸಕರ ಹೆಸರು | ವಿಧಾನ ಸಭಾ ಕ್ಷೇತ್ರ | ಆರ್ಥಿಕ ಇಲಾಖೆಯ ಅ.ಟಿ ಸಂಖ್ಯೆ | ಸರ್ಕಾರದ ಆದೇಶ ಸಂಖ್ಯೆ & ದಿನಾಂಕ | ಅನುಮೋದಿಸಿರುವ ಮೊತ್ತ (ರೂ. ಕೋಟಿಗಳಲ್ಲಿ) | ಹಿಂದಿನ ಸರ್ಕಾರದಲ್ಲಿ ಬಿಡುಗಡೆ ಮಾಡಿದ್ದು | ತಡೆಹಿಡಿದಿರುವುದು | ತಡೆಹಿಡಿದ ಆದೇಶಗಳನ್ನು ಪ್ರಥಮ ಹಂತದಲ್ಲಿ ಸರ್ಕಾರವು ಮುಂದುವರೆಸಿರುವುದು | ಇನ್ನೂ ಕೆರವುಗೊಳಿಸ ಬೇಕಾಗಿರುವ ಮೊತ್ತ |
|---|---|---|---|---|---|---|---|---|---|---|
| 73 | ಧಾರವಾಡ | ಶ್ರೀ ಶಂಕರ ಮುನೇನಕೊಪ್ಪ | ನವಲಗುಂದ | ಆಇ/147/ವೆಚ್ಚ-6 2019, ದಿನಾಂಕ: 19.02.2019 | ಗ್ರಾಅಪ/48/6/ಆರ್‌ಆರ್‌ಸಿ/2019, 26.02.2019 | 3.00 | 0.00 | 3.00 | 3.00 | 0.00 |
| 74 | ಧಾರವಾಡ | ಶ್ರೀ ಎನ್.ಹೆಚ್ ಕೋಣ ರೆಡ್ಡಿ, | ನವಲಗುಂದ | ಆಇ 399 ವೆಚ್ಚ-6 2019, ದಿ: 23.07.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 0.75 | 0.00 | 0.75 | 0.00 | 0.75 |
| 75 | ಗದಗ | ಶ್ರೀ ಎನ್.ಹೆಚ್ ಕೋಣ ರೆಡ್ಡಿ, | ಶಿರಹಟ್ಟಿ | ಆಇ 399 ವೆಚ್ಚ-6 2019, ದಿ: 23.07.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 0.75 | 0.00 | 0.75 | 0.00 | 0.75 |
| 76 | ಹಾಸನ | ಶ್ರೀ ಕೆ.ಎಸ್ ಲಿಂಗೇಶ್ | ಬೇಲೂರು, ಹಾಸನ | ಆಇ 573 ವೆಚ್ಚ-6 2018, ದಿ: 01.01.2019 | ಗ್ರಾಅಪ/04/17/ಆರ್‌ಆರ್‌ಸಿ/2019, 28.01.2019 | 8.00 | 1.58 | 6.42 | 8.00 | -1.58 |
| 77 | ಹಾಸನ | ಶ್ರೀ ಹೆಚ್.ಕೆ. ಕುಮಾರಸ್ವಾಮಿ | ಸಕಲೇಶಪುರ, ಹಾಸನ | ಆಇ 577 ವೆಚ್ಚ-6 2018, ದಿ: 01.01.2019 | ಗ್ರಾಅಪ/04/12/ಆರ್‌ಆರ್‌ಸಿ/2019, 21.01.2019 ಗ್ರಾಅಪ/04/12(1)/ಆರ್‌ಆರ್‌ಸಿ/2019, 09.07.2019 | 7.00 | 0.00 | 7.00 | 6.25 | 0.75 |
| 78 | ಹಾಸನ | ಶ್ರೀ ಸಿ.ಎನ್ ಬಾಲಕೃಷ್ಣ | ಶ್ರವಣಬೆಳಗೊಳ, ಹಾಸನ | ಆಇ 534 ವೆಚ್ಚ-6 2018, ದಿ: 01.01.2019 | ಗ್ರಾಅಪ/05/05/ಆರ್‌ಆರ್‌ಸಿ/2019, 16.01.2019 | 7.00 | 7.00 | 0.00 | 7.00 | -7.00 |
| 79 | ಹಾಸನ | ಶ್ರೀ ಎ.ಟಿ ರಾಮಸ್ವಾಮಿ, ಶಾಸಕರು, ಅರಕಲಗೂಡು | ಅರಕಲಗೂಡು | ಆಇ 25 ವೆಚ್ಚ-6 2018, ದಿ: 11.01.2019 | ಗ್ರಾಅಪ/15/1/ಆರ್‌ಆರ್‌ಸಿ/2019, 24.01.2019 | 8.00 | 0.00 | 8.00 | 7.75 | 0.25 |
| 80 | ಹಾಸನ | ಶ್ರೀ ಕೆ.ಎಸ್ ಲಿಂಗೇಶ್ | ಬೇಲೂರು, ಹಾಸನ | ಆಇ 218 ವೆಚ್ಚ-6 2019,ದಿ: 21.06.2019 | ಕಾಮಗಾರಿ ಪಟ್ಟಿ ನೀಡಿರುವುದಿಲ್ಲ | 3.00 | 0.00 | 3.00 | 0.00 | 3.00 |
| 81 | ಹಾಸನ | ಶ್ರೀ ಕೆ.ಎಂ ಶಿವಲಿಂಗೇಗೌಡ | ಅರಸೀಕೆರೆ, ಹಾಸನ | ಆಇ 574ವೆಚ್ಚ-6 2018, ದಿ: 01.01.2019 | ಗ್ರಾಅಪ/04/07/ಆರ್‌ಆರ್‌ಸಿ/2019, 17.01.2019 | 8.00 | 8.00 | 0.00 | 0.00 | 0.00 |
| 82 | ಹಾಸನ | ಶ್ರೀ ಕೆ.ಎಂ ಶಿವಲಿಂಗೇಗೌಡ | ಅರಸೀಕೆರೆ, ಹಾಸನ | ಆಇ 80 ವೆಚ್ಚ-6 2018, ದಿ: 31.01.2019 | ಗ್ರಾಅಪ/04/17/ಆರ್‌ಆರ್‌ಸಿ/2019, 31.01.2019 | 5.00 | 5.00 | 0.00 | 0.00 | 0.00 |
| 83 | ಹಾಸನ | ಶ್ರೀ ಸಿ.ಎನ್ ಬಾಲಕೃಷ್ಣ | ಶ್ರವಣಬೆಳಗೊಳ, ಹಾಸನ | ಆಇ 78 ವೆಚ್ಚ-6 2018, ದಿ: 30.01.2019 | ಗ್ರಾಅಪ/21/5/ಆರ್‌ಆರ್‌ಸಿ/2019, 01.02.2019 | 5.00 | 1.00 | 4.00 | 0.00 | 4.00 |
| 84 | ಹಾಸನ | ಶ್ರೀ ಎ. ಗೋಪಾಲಸ್ವಾಮಿ ಚನ್ನರಾಯಪಟ್ಟಣ ವಿ.ಪ.ಸದಸ್ಯರು | ಚನ್ನರಾಯಪಟ್ಟಣ | ಆಇ/197/ವೆಚ್ಚ-6/2019, ದಿನಾಂಕ: 06.03.2019 | ಗ್ರಾಅಪ/64/9/ಆರ್‌ಆರ್‌ಸಿ/2019, 08.03.2019 | 1.00 | 0.00 | 1.00 | 0.00 | 1.00 |
| 85 | ಹಾವೇರಿ | ಶ್ರೀ ಬಿ.ಸಿ.ಪಾಟೀಲ್, ಶಾಸಕರು, ಹಿರೇಕೆರೂರು | ಹಿರೇಕೆರೂರು | ಆಇ 42 ವೆಚ್ಚ-6 2019 ದಿ 19.01.2019 | ಗ್ರಾಅಪ/20/3/ಆರ್‌ಆರ್‌ಸಿ/2019, 02.02.2019 | 7.00 | 0.00 | 7.00 | 7.00 | 0.00 |

